ತ್ರೈ ಷೋಃ ಹ ರ ಣ

ಅ ಥ ವಾ ಗ ತ್

# ಬಸ್ ವ್ ಖಾನ್.


— ಲೇಖಕ —

ಸಿದ್ಧರಾಮಪ್ಪ ದುಂಡಪ್ಪ ಸಾವಟ್ಕೆ,
B. A., L. L. B.,
ಹಾಯ್ ಕೋರ್ಟ ವಕೀಲ, ಹುಬ್ಬಳ್ಳಿ.



ಎಂ. ಮಘುಲಿಂಗಪ್ಪ ಹರ್ಡೇಕರ್,
ಇವರು ಹುಬ್ಬಳ್ಳಿಯಲ್ಲಿ ತಮ್ಮ
ಶ್ರೀಲಿಂಗರಾಜ ಮುದ್ರಾಲಯದಲ್ಲಿ ಮುದ್ರಿಸಿದರು.

೧ನೇ ಆವೃತ್ತಿ, ೧೦೦೦ ಪ್ರತಿಗಳು.

ಶಕೆ ೧೮೪೪, ಕ್ರಿಸ್ತಾಬ್ದ ೧೯೨೨.




ಬೆಲೆ ೧ ರೂಪಾಯಿ.

# ಅರ್ಪಣ.





ಲಿಂಗದೃಷ್ಟಿಯು ಲಂಗವನು ಮೇಣ್ ।
ಲಿಂಗಸಂಸ್ಪರ್ಶನದೆ ಕರ್ಮವ ।
ಲಿಂಗಚಿತ್ತದೆ ಮನವ ಹಿಂಗುತ ಲಿಂಗವೇದ್ಯನಾಗಿ ॥
ಲಿಂಗದಂ ಗುರುರುದ್ರ ಪಶುಪತಿ ।
ಲಿಂಗದೇಶಿಕನಾಗು ಹಾಲ್ಲಮು ।
ಲಿಂಗಮದು ತಾನೆನಿಪ ಸದ್ಭಕ್ತಂಗಿದರ್ಪಣವು ॥

ವೈಶಾಖ ಶುಕ್ಲ ೩.<br>ಶಕೆ ೧೮೪೪ ದುಂದುಭಿ.

ಸಿದ್ಧರಾಮಪ್ಪ ದುಂಡಪ್ಪ
ಪಾವಟೆ ಹುಬ್ಬಳ್ಳಿ.

# ಉಪೋದ್ಘಾತ.



ಶ್ರೀಬಸವೇಶನ ವಿಷಯವಾಗಿ ದೂಷಕರು ಹಾಕಿದ ಪ್ರಶ್ನೆಗಳಿಗುತ್ತರವಿದು. ಅನಾದಿಯಿಂದ ಸನಾತನವಾಗಿ ನಡೆದು ಬಂದ ವೀರಶೈವ ಧರ್ಮವೆ ರೂಪುಗೊಂಡು ಬಸವಾಭಿಧಾನದಿಂದವತರಿಸಿದನು. ಕರ್ಮಕಾಂಡಕ್ಕೂ ಜ್ಞಾನಕಾಂಡಕ್ಕೂ ಮೇಲಿನದಾದ ಭಕ್ತಿಯೆ ವೀರಶೈವ ಧರ್ಮಕ್ಕೆ ಬೀಜವು. "ಜ್ಞಾನಾದೇವತು ಮೋಕ್ಷಃ ಸ್ಯಾತ್ತಸ್ಯಾಪ್ಯುಪರಿ ಶಾಂಭವೀ । ಭಕ್ತಿಃ ಪರತರಾಭಾತಿ ಸ್ವತಂತ್ರಾ ನಿಜಲೀಲಯಾ" ಕೈವಲ್ಯ ಸಾರೋದಾಹೃತವಾತೂಲ ತಂತ್ರ. ಆ ಭಕ್ತಿಯನ್ನು ಭುವನದಲ್ಲಿ ಬಿತ್ತರಿಸುವುದೆ ಬಸವಾವತಾರದ ಕಾರ್ಯವು.

ಮಾಯಾ ಪ್ರಕೃತಿ ಕಾರ್ಯಗಳಾದ ಕಲಾ ವಿದ್ಯಾ ರಾಗ ಕಾಲ ನಿಯತಿಗಳಿಂದ ಬದ್ಧನಾಗಿ ಗುಣ ಬುದ್ಧಿ ಮನೋಹಂಕಾರ ಪಂಚಭೂತಾತ್ಮಕ ಕಾಯದಲ್ಲಾತ್ಮ ಮತಿಯಿಂದ ಸಂಸಾರದ ಸುಖದುಃಖಗಳಿಗೀಡಾದವರು ಪ್ರಾಕೃತ ಜೀವರು. ಈ ಭಾವವನ್ನು ದಾಂಟಿ ಪ್ರಕೃತಿ ಪ್ರಾಕೃತತತ್ವಾತೀತವಾದ ಶಿವತತ್ವದಲ್ಲಿ ಲೀನವಾದವರಪ್ರಾಕೃತರು. ಆಪ್ರಾಕೃತ ಭಾವವು ಶಿವಭಕ್ತಿಯಿಂದಲ್ಲದೆ ಲಭಿಸದು.

ಗುಣಕರ್ಮಮಯವಾದ ಪ್ರಾಕೃತ ಪ್ರಪಂಚದಲ್ಲಿ ಗುಣಕರ್ಮ ತಾರತಮ್ಯದಿಂದ ಜೀವನು ದೇವತ್ವ, ಮನುಷ್ಯತ್ವ, ತಿರ್ಯಕ್ತ್ವಗಳನ್ನು ಹೊಂದುವನು. ಹಾಗು ಆಯಾ ಯೋನಿಯಲ್ಲಿಯೂ ತಾರತಮ್ಯವನ್ನುಳ್ಳವನಾಗುವನು. ಮನುಷ್ಯ ಜನ್ಮದಲ್ಲಿಯು ತಾರತಮ್ಯವೆ ಜಾತ್ಯಾದಿಯು. ಇದು ಪ್ರತಿಯೊಬ್ಬನಲ್ಲಿ ನೈಸರ್ಗಿಕವಲ್ಲದೆ ಆಗಂತುಕವಿರದು. ಆಯಾ ಜಾತಿಯ ಲಕ್ಷಣವು ಅನ್ವಯಿಸುವ ಜೀವನಿಗೆ ಅದನ್ನು ಹೇಳತಕ್ಕುದು. "ಚಾತುರ್ವರ್ಣ್ಯಂ ಮಯಾ ಸೃಷ್ಟಂ ಗುಣಕರ್ಮ ವಿಭಾಗಶಃ".

ಇಂತಹ ಪ್ರಪಂಚದಲ್ಲಿ ತೊಳಲುವ ಜೀವನು ಅದರಿಂದ ವಿರಕ್ತನಾಗಿ ಬಿಡುಗಡೆಯನ್ನು ಹೊಂದಲು ಪ್ರಯತ್ನಶೀಲನಾಗುವನು, ಆಗ

ತಾನಾರು, ತನಗೂ ಪ್ರಪಂಚಕ್ಕೂ ಸಂಬಂಧವೇನು. ತನಗೆ ಬಂಧವಾದ ಬಗೆಯಾವುದು? ಇನ್ನು ಮುಕ್ತಿಗೆ ಕಾರಣವೇನು? ಎಂಬೀ ಮೊದಲಾದ ವಿಚಾರತರಂಗಗಳು ತೋರಹತ್ತುವುವು. ಆಯಾ ಜೀವನ ವಿಕಾಸ ತಾರತಮ್ಯಕ್ಕನುಸರಿಸಿ ಬೌದ್ಧಾದಿ ವೀರಶೈವಾಂತವಾದ ಆಧ್ಯಾತ್ಮ ಶಾಸ್ತ್ರಗಳಲ್ಲೊಂದರಲ್ಲಿ ಪ್ರವೇಶಿಸುವನು. ಬೌದ್ಧಾದಿ ಶಾಸ್ತ್ರಗಳು ಅರ್ವಾಚೀನವಾದ ಬುದ್ಧ್ಯಾದಿ ತತ್ವಗಳಲ್ಲಿಯೆ ಪರ್ಯವಸಾನವನ್ನು ಹೊಂದುವುದರಿಂದ ಮುಕ್ತಿಯು ನಿಜವಾದ ಮಾರ್ಗವು ಪ್ರಕೃತಿಯ ತೊಡಕನ್ನು ಹರಿದು ಹಾಕುವ ವೀರಶೈವ ಸಿದ್ಧಾಂತವೆ.

ಪ್ರಕೃತಿಯು ಆತ್ಮನನ್ನು ಬಂಧನಕ್ಕೀಡು ಮಾಡುವುದು. ಅದರೆ ಆತನ ವ್ಯಾಪಕತ್ವ ನಿತ್ಯತ್ವಾದಿಗಳನ್ನು ಸಂಕೋಚವನ್ನೈದಿಸಿ ಖಂಡಿತನನ್ನಾಗಿಸುವುದು. ಈ ಖಂಡಿತತ್ವದಿಂದಲೆ ನೈಸರ್ಗಿಕ ಜಾತ್ಯಾದಿಗಳು ತೋರುವುವು. ಇದು ಸ್ವಾಭಾವಿಕ ಸಂಸಾರವು. ಆದರೆ ಮನುಷ್ಯರು ರಾಗದ್ವೇಷಾದಿಗಳಿಗೊಳಪಟ್ಟು ಕೃತ್ರಿಮವಾದ ಜಾತಿಗಳನ್ನು ರಚಿಸಿದರು. ಜನ್ಮದಿಂದಲೆ ಒಂದು ವರ್ಗದ ಉತ್ತಮತ್ವವನ್ನೂ ಮತ್ತೊಂದು ವರ್ಗದ ಅಧಮತ್ವವನ್ನೂ ಸಾಧಿಸಹತ್ತಿದರು. ಹೀಗಾಗಿ ಅಸ್ವಾಭಾವಿಕ ವರ್ಣವಿಭಾಗವುಂಟಾಗಿ ಬಲಿಷ್ಠರು ದುರ್ಬಲರನ್ನು ಪೀಡಿಸಲುಪಕ್ರಮವಾದಿತು. "ಬ್ರಾಹ್ಮಣೋ ಯಜೇತೇತ್ಯಾದೀನಿ ಶಾಸ್ತ್ರಾಣ್ಯಾತ್ಮನಿ ವರ್ಣಾಶ್ರಮವಯೋವಸ್ಥಾದಿ ವಿಶೇಷಾಧ್ಯಾಸಮಾಶ್ರಿತ್ಯ ವರ್ತಂತೇ ಅಧ್ಯಾಸೋ ನಾಮಾತಸ್ಮಿಂಸ್ತದ್ಬುದ್ಧಿರಿತ್ಯವೋಚಾಮ" ಎಂದು ಜಾತ್ಯಾದಿಗಳು ಆತ್ಮನಲ್ಲಿ ಕಲ್ಪಿತವಾದವುಗಳು ಎಂಬೀ ಸಿದ್ಧಾಂತವನ್ನು ಸಾರಿದ ಶಂಕರಾಚಾರ್ಯರಿಗೂ ಕೃತ್ರಿಮ ವರ್ಣವಿಭಾಗದ ತೊಡಕಿನಿಂದ ಬಿಡುಗಡೆಯಾಗಲಿಲ್ಲ. "ಆಪಾದಮಸ್ತಕಮಹಂ ಮಾತಾಪಿತೃವಿನಿರ್ಮಿತಃ। ಇತ್ಯೇಕೋ ನಿಶ್ಚಯೋ ರಾಮ ಬಂಧಾಯಾಸದ್ವಿಲೋಕನಾತ್ ॥ ನಾಕಾಲಸೂತ್ರ ಪದವೀ ನಾಮಹಾವೀಚಿವಾಗುರಾ ನಾಸಿಪತ್ರ ವನಶ್ರೇಣೀ ಯಾದೇಹೋ ಹಮಿತಿಸ್ಥಿತಿಃ" ಯೋಗವಾಸಿಷ್ಠ ವೈರಾಗ್ಯ ಪ್ರಕರಣ— ಎಂಬೀ ವಾಸಿಷ್ಠೋಕ್ತಿಯಂತೆ ತಾನು ಮಾತಾಪಿತೃಜನ್ಯವಾದ ಪಿಂಡರೂಪನೆಂಬ ಬುದ್ಧಿಯೆ ನರಕವೆಂಬುದೆ

ಪುಟ್ಟಿಗುಳಿದು ಆ ಬುದ್ಧಿಯಿಂದಲೆ ಉಂಟಾದ ವರ್ಣವಿಭಾಗಕ್ಕನುಸರಿಸಿ ಶೂದ್ರನು ವೇದಾಂತಶ್ರವಣಕ್ಕರ್ಹನಲ್ಲೆಂದು "ವೇದಪೂರ್ವಕಸ್ತು ನಾಸ್ತ್ಯಧಿಕಾರಃ ಶೂದ್ರಾಣಾಮಿತಿ ಸ್ಥಿತಮ್" ಬ್ರ. ಸೂ. ೧-೩೦-೩೮. ಎಂದು ಶಂಕರಾಚಾರ್ಯರು ನಿರ್ಣಯಿಸಿದರು.

ಆಗಮ ಸಂಹಿತೆಗಳಲ್ಲಿ ಪ್ರಾಕೃತರಲ್ಲಿ ನೈಸರ್ಗಿಕ ಸ್ವಕೀಯ ಜಾತಿಯು ಅಂಗೀಕೃತವಿದೆ. ಅದರಿಂದಲೆ ಶುದ್ಧ, ಮಿಶ್ರ, ಅಂತರ, ಎಂಬೀ ಮೊದಲಾದ ಶೈವಭೇದಗಳು. ಅದರೆ ವೀರಶೈವದಲ್ಲಿ ಮಾತ್ರ ಜಾತಿಭೇದವು ತೋರಲಾರದು. "ಭಕ್ತಸ್ಯಪ್ರಾಕ್ತನಂ ಜನ್ಮನಾಮಜಾತ್ಯಾದಿಕಂ ಚಯತ್ । ಪೃಚ್ಛೇದ್ಯಾಕಥಯೇದ್ವಾಪಿಸವೈ ಪಾತಕಿನಾಂ ವರಃ" "ಅಪಿವಾಯಶ್ಚಂಡಾಲಃ ಶಿವ ಇತಿ ವಾಚಂವದೇತ್ ತೇನ ಸಹವಸೇತ್ತೇನ ಸಹವಿಶೇತ್ತೇನ ಸಹಭುಂಜೀತತೇನಸಹ ಭುಂಜೀತ" ಇತ್ಯಾದಿ ನಿಗಮಾಗಮಗಳು ಪ್ರಮಾಣವಾಗಿವೆ.

ಇಂತಹ ವೀರಶೈವ ಮಾರ್ಗವು ಸನಾತನವಾದುದಾದರು ಬಹಳ ಕಾಲದಿಂದ ಲುಪ್ತಪ್ರಾಯವಾಗಿದ್ದಿತು. ಅದನ್ನುದ್ಧರಿಸಲು ಬಸವನವತರಿಸಿದನು. ಆತನವತರಿಸಿದುದು ಬಾಗವಾಡಿಯಲ್ಲಿ ಮಾದರಸ ಮಾದಲಾಂಬಿಯರ ಪುಣ್ಯಗರ್ಭದಲ್ಲಿ, ಜನನವಾದೊಡನೆಯೆ ಅಂತರಾತ್ಮನಲ್ಲಡಕವಾಗಿರ್ದಲಿಂಗವನು ಸಂಗಮೇಶನು ಬಹಿರಂಗದಲ್ಲಿ ಸಂಗತಂಗೊಳಿಸಿದನು. ಮಾದಲಾಂಬಿಯು ತಪಃ ಪ್ರಭಾವದಿಂದಾಕೆಯುದರದಲ್ಲಿ ಜನಿಸಿದಂತೆ ತೋರಿದರು. ಜಡಶಿಶುಗಳಲ್ಲಿರುವ ಗುಣಕರ್ಮಗಳು ಬಸವನಲ್ಲಿ ತೋರದೆ ಬಾಲ್ಯದಲ್ಲಿಯೆ ಲಿಂಗಸಂಗವು ವ್ಯಕ್ತವಾಗಿರುವುದರಿಂದ ಬಸವನು ಮಾದರಸನ ಮಗನಲ್ಲ. ನಿಜವಾಗಿಗುರುಜಾತನೆ ಎಂಟನೆಯ ವರ್ಷದಲ್ಲಿ ಉಪನಯನವನ್ನು ಧಿಕ್ಕರಿಸಿ ತಂದೆತಾಯಿಗಳನ್ನು ತ್ಯಜಿಸಿದನು. ಸೋದರಮಾವನಾದ ಬಲದೇವನು ವೀರಶೈವದೀಕ್ಷಾಪೂರ್ವಕವಾಗಿ ಮಗಳನ್ನು ಕೊಟ್ಟು ಮದುವೆ ಮಾಡಿದನು. ಬಿಜ್ಜಳನರಮನೆಯಲ್ಲಿ ಬಿಜ್ಜ ಶಿವಲಿಖಿತವನೋದಿ ಆತನ ಪ್ರಧಾನ ಸಚಿವನಾದನು. ಪರಮಸ್ವತಂತ್ರನ [illegible] ಶಿವಮಾರ್ಗ [illegible] ಕೃತ್ಯ[illegible]

ಜಾತ್ಯಾದಿಗಳನ್ನು ಲಕ್ಷಿಸದೆ ಶಿವಶರಣರು ಶಿವನೆಂದೇ ಜಗತ್ತಿನಲ್ಲಿ ಪ್ರತಿಷ್ಠಿಸಿದನು. ತನ್ನ ಆಚರಣದಿಂದ ಭಕ್ತಿಮಾರ್ಗದ ರಹಸ್ಯವನ್ನು ಪ್ರಪಂಚಕ್ಕರುಹಿದನು. ಆಯಾ ಪ್ರಸಂಗಗಳಲ್ಲಾಡಿದ ವಚನಗಳಿಂದ ಷಟ್ಸ್ಥಳ ಸಿದ್ಧಾಂತ ಶಾಸ್ತ್ರವನ್ನೇ ರಚಿಸಿದನು.

ಬಸವಾವತಾರದಿಂದ ಕರ್ನಾಟಕವು ಪಾವನವಾಯಿತು. ಕೃತ್ರಿಮ ವರ್ಣವಿಭಾಗದಿಂದ ಉದ್ಯಮದ ಮಹತ್ವವು ಅಡಗಿ ಅರ್ಥೋತ್ಪಾದಕ ಉದ್ಯೋಗಗಳನ್ನು ಮಾಡುವರು ಶೂದ್ರರೆಂಬ ಕನಿಷ್ಠ ವರ್ಣದವರಾಗಿದ್ದರು. ಅವರಲ್ಲಿಯು ಸ್ವಾಭಿಮಾನವೂ ಸ್ವಾತಂತ್ರ್ಯವೂ ಇಲ್ಲವಾಗಿತ್ತು. ಈ ಅಸ್ವಾಭಾವಿಕ ವಿಭಾಗವನ್ನು ಜೈನಧರ್ಮವು ಹಿಂಬಾಲಿಸಿದುದರಿಂದ ನಿರೀಶ್ವರತ್ವದ ಅನಿಷ್ಟ ಪರಿಣಾಮವನ್ನುಂಟು ಮಾಡಿತ್ತು. ಹಾಗು ಆಸ್ತಿಕರು ಆ ಮಾರ್ಗವನ್ನವಲಂಬಿಸುವಂತಿರಲಿಲ್ಲ. ಬಸವನ ಅವತಾರ ಕಾರ್ಯದಿಂದ ಕೃಷಿವಾಣಿಜ್ಯ ಕೈಗಾರಿಕೆ ಮುಂತಾದ ಹೋರಿಗಳನ್ನು ಮಾಡುವರು ಉತ್ತಮವಾದ ವೀರಶೈವ ಮಾರ್ಗವನ್ನು ಹೊಂದಿ ಹೋರಿಗಳಿಂದ ಹೀನರೆನಿಸದೆ, ಆಧ್ಯಾತ್ಮಿಕಾಸದಿಂದ ತಮ್ಮ ತಮ್ಮ ಹೋರಿಗಳನ್ನು ಮಾಡಹತ್ತಿದರು. ಬ್ರಾಹ್ಮಣನಿಂದ ಅಂತ್ಯಜನ ವರೆಗೆ ಈ ಧರ್ಮ ಶಕ್ತಿಗೆ ವಶನಾಗದೊಬ್ಬನುಳಿಯಲಿಲ್ಲ. ಪಾಲ್ಕುರಿಕೆಯ ಸೋಮಾರಾಧ್ಯನು ಭೀಮನು ರಾಘವಾಂಕನು ಇವರೆ ಮೊದಲಾದ ನರೋತ್ತಮರು ಲಿಂಗಾಯತ ಮತದವರಾಗಿ ಬಸವನನ್ನು ಕೊಂಡಾಡಿರುವರು. ನಿಜವಾದ ಭಕ್ತಿ ಸತ್ಯವಚನ ಮುಂತಾದವುಗಳಿಂದ ಮನುಷ್ಯನ ಯೋಗ್ಯತೆಯಾಗಹತ್ತಿತು. ಅಥಾತ್ ಈ ದೇಶಕ್ಕೆ ನವೀನಜೀವಕಳೆಯು ಪ್ರಾಪ್ತವಾದಿತು. ಇಂದಿಗೂ ಕರ್ನಾಟಕದಲ್ಲಿಯ ಸರ್ವ ಅರ್ಥೋತ್ಪಾದಕ ಉದ್ಯಮಗಳು ಲಿಂಗವಂತರ ಬಳಿಕೆಯಲ್ಲಿರುವುದು. ಈ ಮತವು ಆರ್ಥಿಕ ಸಂಪತ್ತಿಗೆ ಎಷ್ಟು ಪ್ರೋತ್ಸಾಹಕ ವಿತ್ತೆಂಬುದನ್ನು ತೋರಿಸುತ್ತದೆ.

ಬಸವನ ಕಾಲದ ಧರ್ಮಜಾಗೃತಿಯನ್ನು ನೋಡಿದರೆ ಭರತಖಂಡದ ಇತಿಹಾಸದಲ್ಲಿ ಇದು ಅಪೂರ್ವವೆಂದು ಹೇಳಬಹುದು. ವೇದಕಾ

ಲದಲ್ಲಿ ಸ್ತ್ರೀಯರು ಧರ್ಮೋಪದೇಶಿನಿಯರಿದ್ದರು. "ಇಲಾಮಕೃಣ್ವನ್ಮ ನುಷಸ್ಯಶಾಸನೀಂ" ಋಗ್ವೇದ ೧ ಮಂಡಲ ೭ ಅನುವಾಕ ೧ ಸೂ. ೧೧ ಮಂತ್ರ. ಇಳೆಯನ್ನು ಮನುಷ್ಯರ ಉಪದೇಶಿನಿಯನ್ನು ಮಾಡಿದರು. ಮಂತ್ರದ್ರಷ್ಟ್ರಿಯರಾಗಿದ್ದರು. "ಘೋಷಾಯೈಚಿತ್ ಪಿತೃಷದೇ ದುರೋಣೇಪತಿಂ ಜುಯಂತ್ಯಾ ಅಶ್ವಿನಾವದತ್ತಂ" ೧ ಮ. ೧೭. ಅ. ೨. ಸೂ. ೭ ಮಂತ್ರ ಎಲೈ ಅಶ್ವಿನಿದೇವತೆಗಳೆ ಘೋಷೆಯೆಂಬ (ಕಕ್ಷೀವಂತನ ಮಗಳು) ಬ್ರಹ್ಮವಾದಿನಿಯು (ಕುಷ್ಠರೋಗಾರ್ತೆಯಾಗಿ ವಿವಾಹವಿಲ್ಲದೆ) ಮನೆಯಲ್ಲಿ ತಂದೆಯ ಬಳಿಯಲ್ಲಿರುವಳಾಗಿ ಮುದುಕಿಯಾಗಿರಲು, ಆಕೆಗೆ [ ಪುನಃ ಯೌವನವನಿತ್ತು ] ಪತಿಯನ್ನು ದಯಪಾಲಿಸಿದಿರಿ. ಈ ಘೋಷೆಯು ತನ್ನ ಕುಷ್ಠನಿವಾರಣಕ್ಕಾಗಿ ಅಶ್ವಿನರಪರವಾಗಿ ಋಕ್ಕುಗಳನ್ನು ಹಾಡಿದಳೆನ್ನುವಲ್ಲಿ. "ಆವೋರುವಣ್ಯ ಮಾತಿಜೋಹುವದ್ಧ್ಯೇಘೋಷೇವ ಶಂಸಮರ್ಜುನಸ್ಯ ನಂಶೇ" ಋ ೧. ೧೮. ೨. ೫. ಎಲೈ ಅಶ್ವಿದೇವತೆಗಳೇ ತನ್ನ ಶ್ವೇತಕುಷ್ಠದ ನಾಶಕ್ಕಾಗಿ ಘೋಷೆಯು ಇಂಪಾದ ಋಕ್ಕನೆಂತು ಹಾಡಿದಳೊ ಅದರಂತೆಯೆ ನಾನಾದರು ಇಂಪಾದ ಋಕ್ಕನ್ನು ಹಾಡುವೆನು. ಇದರಂತೆಯೆ ರೋಮಶೆಯು ಲೋಪಾಮುದ್ರೆಯು ಮುಂತಾದ ಸ್ತ್ರೀಯರ ಉದಾಹರಣಗಳುಂಟು. ಉಪನಿಷತ್ಕಾಲದಲ್ಲಿ ಜನಕನ ಸಭೆಯಲ್ಲಿ, ಗಾರ್ಗೀವಾಚಕ್ನವೀ ಮೊದಲಾದ ಬ್ರಹ್ಮವಿದುಷಿಯರಿದ್ದರು. ಯಾಜ್ಞವಲ್ಕ್ಯನ ಪತ್ನಿಯಾದ ಮೈತ್ರೇಯಿಯು ಪತಿಯಿಂದ ಬ್ರಹ್ಮೋಪದೇಶವಂ ಪಡೆದಳು. ಇದೆಲ್ಲ ಅರ್ವಾಚೀನಕಾಲದಲ್ಲಿ ಸಗಿ ಸ್ತ್ರೀಶೂದ್ರರಿಗೆ ವಿದ್ಯಾಭ್ಯಾಸಂಗವು ನಿಷಿದ್ಧವಾಗಿದ್ದಿತು. "ಸ್ತ್ರೀಶೂದ್ರೌ ನಾಧೀಯಾತಾಮ್" ಎಂಬುದೊಂದು ಧರ್ಮಬಾಧನೆಯಾಗಿದ್ದಿತು. ಶ್ರೀಬಸವನ ಕಾಲದಲ್ಲಾದ ಧರ್ಮಪ್ರಕಾಶವನ್ನು ನೋಡಿರಿ ಮುಕ್ತಾಯಿ, ಮಹದೇವಿಯಕ್ಕ, ನಾಗಲಾಂಬಿಕೆ, ನೀಲಾಂಬಿಕೆ, ಮೊದಲಾದ ಶರಣೆಯರ ವಚನಗಳು. ವೈದಿಕ ಬ್ರಹ್ಮವಿದುಷಿಯರನ್ನು ಹಿಂದುಮಾಡುವವಾಗಿವೆ. ಒಕ್ಕಲತನ ಮುಂತಾದ ಹೊರೆಗಳನ್ನು ಮಾಡುತ್ತಿರುವ ಅಜಗಣ್ಣ, ಗೋಗಯ್ಯ, ಸಿದ್ಧರಾಮಯ್ಯ, ಮೊದಲಾದವರ ವಚನಭಣಿತಿಯು ಉಪನಿಷದ್ವಾಕ್ಯಗಳ ಸರಳತೆಯನ್ನು

ಸರಿಗಟ್ಟುವತ್ತಿದೆ. ಇಲ್ಲಿ ಒಂದೆರಡು ಉದಾಹರಣೆಗಳನ್ನು ಕೊಡುವೆನು. ಶ್ರೀಮದಲ್ಲಮನು ಮುಕ್ತಾಯಿಯನ್ನು ಕಂಡು ನೀನಾರೆಂದು ಬೆಸಗೊಳಲು ಆಕೆಯು ತನ್ನ ಸ್ವರೂಪವನರುಹಿದ ವಚನ “ಆರೆಂದು ಕುರುಹು ಬೆಸಗೊಳಲು, ಏನೆಂದು ಹೇಳುವೆನಯ್ಯಾ, ಕಾಯದೊಳಗೆ ಮಾಯೆಯಿಲ್ಲ, ಭಾವದೊಳಗೆ ಭ್ರಮೆಯಿಲ್ಲ, ಕರೆದುಬೆಸಗೊಂಬರೆ ಕುರುಹಿಲ್ಲ, ಒಬ್ಬರಿಗಡಿ ಹುಟ್ಟಿದೆ, ಅಯೋನಿಯೊಳು ಬಂದು, ದುರ್ಬುದ್ಧಿಯಾಳಿಗೊಂಡಳ ಸೇನೆಂಬೆನಣ್ಣಾ, ತಲೆಯಲಿದುತಲೆಗೆಟ್ಟು ಬೆಳಗುವಜ್ಯೋತಿ ಎನ್ನ ಅಜಗಣತಂದೆಯ ಚಿನ್ನಬಳಿಯವಳು ನಾನಯ್ಯಾ” ದ್ವಿತೀಯ ಸಂಪಾದನೆ ೨. ಮಹದೇವಿಯಕ್ಕಗಳು ಪರಮ ವಿರತಿ ಭಾವದಿಂದ ಅಂಗಗುಣಂಗಳಂ ಕಳೆದು ಲಿಂಗೇಂದ್ರಿಯಗಳಳವಟ್ಟು ಕರದಿಷ್ಟಲಿಂಗದಲ್ಲಿ ದೃಷ್ಟಿನಟ್ಟು ದಿಗಂಬರೆಯಾಗಿ ಬಸವಾದಿಗಳ ಸನ್ನಿಧಿಗೆ ಬರುವಲ್ಲಾಡಿದ ವಚನ “ಅಂಗದ ಭಂಗವ ಲಿಂಗಮುಖದಿಂದೆ ಗೆಲಿದೆನು. ಮನದ ಭಂಗವ ಅರುಹಿನ ಮುಖದಿಂದೆ ಗೆಲಿದೆನು. ಕರಣಕತ್ತಲೆಯ ಬೆಳಗನುಟ್ಟು ಗೆಲಿದೆನು. ಜವ್ವನದ ಹೊಸ ಮಿಂಚಿನಲ್ಲಿ ನಾವು ಕಾಣಿಗೆ ತೋರುವ ಕಾಮನ ಸುಟ್ಟುರುಹಿದ ಭಸ್ಮಿತ ಕೋಪ ಮಯ್ಯಾ ಚನ್ನಮಲ್ಲಿಕಾರ್ಜುನ ಕಾಮನಕೊಂದು ಮನಸಿಜನಾಗುಳುಹಿದರೆ, ಮನಸಿಜನ ತಲೆಯ ಬರಹ ತೊಡೆದೆನು” ೧೬ ನೆಯ ಸಂಪಾದನೆ ೨.

ಈ ವಾಕ್ಯಗಳನ್ನು ಸರಿಗಟ್ಟುವ ನುಡಿಗಳು ವೇದದಲ್ಲಿಲ್ಲ ಉಪನಿಷತ್ತುಗಳಲ್ಲಿಲ್ಲ ಕೆಯ್ಯೆತ್ತಿ ಹೇಳುವೆನು ಸ್ಮೃತಿ ಪುರಾಣಗಳಲ್ಲಿಲ್ಲ.

ಬಸವನೆಂಬ ಸೂರ್ಯನುದಯದಲ್ಲಿ ತೋರಿದೀ ಜ್ಞಾನಪ್ರಕಾಶವು ಹಿಂದಿನ ವೈದಿಕಕಾಲದ ಋಷಿಗಳ ಬೆಳಗಿಗಿಂತ ಅಧಿಕವಾಗಿದ್ದಿತು. ಉಪನಿಷತ್ತಿನಲ್ಲಿರುವ ಜ್ಞಾನಪರ ವಾಕ್ಯಗಳಲ್ಲಿ ಸಾಮಾನ್ಯ ಜನತೆಗೆ ನಿತ್ಯವಾಗಿಯೂ ಬೋಧವಾಗುವ ಒಲುಗಳನ್ನು ಕೊಟ್ಟು ಬೋಧಿಸುವ ಉದಾಹರಣೆಗಳಿಲ್ಲ. ಅದೇ ನಮ್ಮ ತ್ರಿಭುವನಗುರು ಅಲ್ಲಮನ ವಾಕ್ಯವ ನೋಡು “ತನುವ ತೋಟವ ಮಾಡಿ ಮನವ ಗುದ್ದಲಿಯ ಮಾಡಿ ಅಗೆದು ಕಳೆದೆನಯ್ಯ ಭ್ರಾಂತಿಯ ಬೇರ ಒಡೆದು ಸಂಸಾರ ಹೆಂಟೆಯ ಬಗೆದು ಬಿತ್ತಿದೆನಯ್ಯಾ ಬ್ರಹ್ಮಬೀಜವ, ಅಖಂಡವೆಂಬ ಬಾವಿ ಪವನವೆ

ಬರಾಬರಿ, ಸುಷುಮ್ನದಿಂದುಕವತಿದ್ದ ಬಸವಯ್ಯಗಳು ಹಸಗೆಡಿಸಿದವೆಂದು ಸಮತೆ ಸೈರಣೆಯೆಂಬ ಬೇಲಿಯನ್ನಿಕ್ಕಿ ಆವಾಗಲೂ ಈ ತೋಟದಲ್ಲಿ ಜಾಗರವಿದ್ದು ಸಸಿಯ ಸಲಹಿಹೆನು ಕಾಣ. ಗೊಹೇಶ್ವರ ೧ ನೆ ಸಂಪಾದನೆ ೨೫.

ಇರಲಿ; ಈ ದಿವ್ಯ ತೇಜವಡಗಿ ಈಗೆತ್ತ ನೋಡಿದರು ಕತ್ತಲೆಗವಿದಿದೆ. ಈ ಜ್ಞಾನಜ್ಯೋತಿಯನೆ ಕಾಪಾಡಲೆಂದಿಟ್ಟ ಕಾಪಿನವರು ಎಚ್ಚರದಪ್ಪಿರುವರು. ಗುರುಪೀಠಗಳೂ, ಜಂಗಮಸ್ಥಾನಗಳೂ, ಭಕ್ತನಿಲಯಗಳೂ ಅಂಧಕಾರಪರಿಭೂತವಾಗಿವೆ. ಇದಕ್ಕೆ ಕಾರಣವೇನು? ಭೇದವು, ಒಡಕು, ಅಸೂಯೆಯು, ಕುಲಮದವು, ಅಹಂಕಾರವು. ಶಿವಭಕ್ತರೆಲ್ಲ ಒಂದೆ ಉದರದವರೆಂಬ ಭಾವವನ್ನು ಬೀರುವ ನಡೆನುಡಿಗಳಿಲ್ಲವಾಗಿ ನಾನು ಹೆಚ್ಚು ನೀನು ಕೀಳನು ಎಂಬ ಬುದ್ಧಿಯು ನಮ್ಮಲ್ಲಿ ನೆಲೆಗೊಂಡಿತು. ಐಕ್ಯವೆಂಬುದಿಲ್ಲವಾಗಿ ಹಲವು ಪಂಗಡಗಳಾದುವು. ವಿರಕ್ತರ ಮೇಲೆ ನಾವೆಂದು ಗುರುಗಳು, ಗುರುಗಳ ಮೇಲೆ ನಾವೆಂದು ವಿರಕ್ತರು, ಬಡದಾಡ ಹತ್ತಿದರು. ವಿಶಿಷ್ಟ ಕುಲದವರೇ ಗುರುಗಳಾಗಬೇಕೆಂಬ ಹೇವವು ಬೇರೂರಿತು. ನಮ್ಮಲ್ಲಿರುವ ದೋಷಗಳನ್ನು ಎಚ್ಚರಿಸಲಿಕ್ಕೆ ಆರೆಂದು ಅಹಂಕಾರವು ಗುರುಗಳಲ್ಲಿ ಇಂಬುಗೊಂಡಿತು. ಇದರ ಪರಿಣಾಮವು—ಧಾರ್ಮಿಕ ಸಂಸ್ಕಾರಗಳ ಅಭಾವವು, ಗುರುಪೀಠಗಳಲ್ಲಿ ವಿದ್ಯಾಹೀನತೆ, ಆಚಾರವರಣಗಳ ಅನಾದರವು, ಇಂತನೇಕಾನಿಷ್ಟಗಳಾಗಿವೆ. ಸ್ಮೃತಿಕಾಲದಲ್ಲಿ ಬ್ರಾಹ್ಮಣರಷ್ಟೇ ವಿದ್ಯಾರ್ಹರೆಂಬ ರೂಢಿಯು ಬಲಗೊಂಡಂತೆ ವಿಶಿಷ್ಟ ವರ್ಗದವರೇ ವಿದ್ಯಾಧಿಕಾರಿಗಳೆಂಬ ಹೆಚ್ಚುಯ ಮೇಲೆ ಕೆಲವು ಸಂಸ್ಥೆಗಳು ನಡೆದಿರುವುವು. ಈ ಸಂಸ್ಥೆಗಳಿಗೆ ತಮ್ಮ ಹೊಟ್ಟೆಯನ್ನಾದರು ಕಟ್ಟಿ ದುಡ್ಡನ್ನು ಪೂರೈಸುವ ಭಕ್ತಜನರ ಮಕ್ಕಳನ್ನು ತೆಗೆದುಕೊಳ್ಳಲಾಗುವುದಿಲ್ಲೆಂದು ಅವುಗಳ ಸ್ಥಾಪಕ ಮಹಾಶಯರು ನಿರ್ದಾಕ್ಷಿಣ್ಯದಿಂದ ಹೇಳುವರು. ಈ ವರೆಗೆ ಗುರುಗಳಾಗುತ್ತ ಬಂದ ಒಂದು ವಿಶಿಷ್ಟ ವರ್ಗದಲ್ಲಾದರು ಅವಾಂತರಭೇದವು ತಲೆದೋರಿ ಭಕ್ತ ಮನೆತನದಿಂದ ಬಂದ ಗುರುಗಳು ಅಷ್ಟೊಂದು ಯೋಗ್ಯರಲ್ಲೆಂಬ ಅಸಹ್ಯಭಾವವು ತಲೆದೋರ ಹತ್ತಿದೆ. ಇದಕ್ಕೆಲ್ಲ ಶಿಖಾಮಣಿಯಾಗಿ ಪ್ರಮಥ ನಿಂದೆಯು ಪ್ರಾರಂಭವಾಗಿದೆ.

ವೀರಶೈವ ಬಾಂಧವರೇ! ಬಸವಾದಿ ಪ್ರಮಥರನ್ನಳಿದರೆ ನಿಮಗೆ ಮುಖ್ಯಯುಗೀನೇತಿಹಾಸವೂ, ವಾಙ್ಮಯವೂ ಇಲ್ಲ. ಅತ್ಯಂತ ಪುರಾತನದ ವೈದಿಕ ಮಂತ್ರಗಳಲ್ಲಿಯೂ ಆಗಮಗಳಲ್ಲಿಯೂ ಈ ಮತತತ್ವಗಳಿಂಬುಗೊಂಡಿರುವುದರಿಂದ ನಮ್ಮ ಪೂರ್ವೇತಿಹಾಸಕ್ಕೇನು ಬಾಧೆ ಎಂಬಿರೋ? ನೀವು ಆವ ಮಂತ್ರಗಳು ಲಿಂಗಧಾರಣಪರವೆನ್ನುವಿರೋ ಅವುಗಳನ್ನು ಮತಾಂತರದವರು ಸ್ವಮತ ಪ್ರತಿಪಾದಕವೆನ್ನುವರು. ಆಗಮಗಳು ಸಂಕೀರ್ಣವಾಗಿ ಸಪ್ತವಿಧ ಶೈವವನ್ನು ಬೋಧಿಸುತ್ತವೆ. ಶುದ್ಧ ವೀರಶೈವವನ್ನು ವಿಸ್ತರವಾಗಿ ಕರತಲಾಮಲಕವಾಗುವಂತೆ ಬೋಧಿಸಿಲ್ಲ. ನಿಮ್ಮ ನೂರೊಂದು ಸ್ಥಳದ ಹಸುಗೆಯು ವಚನಶಾಸ್ತ್ರಗಳಲ್ಲಲ್ಲದೆ ದೊರೆಯುವುದಿಲ್ಲ. ಪ್ರಮಥ ನಿಂದಕರು ನಿಮ್ಮನ್ನು ಕರೆಯುವ ಮಾರ್ಗಕ್ಕೆ ತುಳಿಯುವರಾದರೆ ಈಗ ಎಂಟು ನೂರು ವರ್ಷಗಳಿಂದ ನಿಮ್ಮ ಗುರುಹಿರಿಯರು ನಡೆದ ಮಾರ್ಗವು ತಪ್ಪೆಂದು ಹೊಸ ಮಾರ್ಗವನ್ನು ಹಿಡಿಯಬೇಕಾಗುವುದು. ಅಂದ ಬಳಿಕ ಅನಾದಿ ಪರಂಪರೆಯಲ್ಲಿ ಈ ಎಂಟು ನೂರು ವರ್ಷಗಳದೊಂದು ಛಿದ್ರವಾಗುವುದಿಷ್ಟೆಯಲ್ಲ. ನಿಮ್ಮ ಹೊಸ ಮಾರ್ಗವು ಅಪರಂಪರೆಯೆನ್ನಗಲಿ ನಿಮ್ಮಲ್ಲಿ ಅನೇಕ ಪಂಗಡಗಳುಂಟಾಗಿ ನಿಮ್ಮ ಭಾವೀತಿಹಾಸವು ದುಃಖಮಯವಾಗುವುದು. ಬಸವನು ಬೋಧಿಸಿದ ವಿಶ್ವವ್ಯಾಪಕ ತತ್ವಗಳ ಅರಿವು ಈಗೀಗ ಉಂಟಾಗಿ ಆತನು ಮಾಡಿದ ಸುಧಾರಣಕ್ಕೆ ಪರಮತೀಯರು ತಲೆದೂಗುತ್ತಿರುವರು. ನೀವದನ್ನಗಲಿದರೆ ಅಮೃತವು ಕೈಯಲ್ಲಿರಲು ಅದನ್ನೊಗೆದು ವಿಷವನೀಂಟಿದವನ ಗತಿಗೀಡಾಗುವಿರಿ.

ಅಥವಾ ಇಷ್ಟು ವ್ಯಾಕುಲಿತನಾಗಲು ಕಾರಣವಿಲ್ಲ. ಬಸವಭಾನುವಿಗೆ ಪ್ರಾಪ್ತವಾದ ಗ್ರಹಣವು ಈಗ ಖಗ್ರಾಸವಾದಿತು. ಇನ್ನು ಮೋಕ್ಷಕಾಲವು ಬಂದಿತು. ತನ್ನ ಪ್ರಖರ ತೇಜಸ್ಸಿನಿಂದಾ ವಿಭಾಕರನು ಈ ತಮಸ್ಸನ್ನು ಹರಣ ಮಾಡುತ್ತಿರಲು, ಮೋಕ್ಷಮಂತ್ರವನ್ನು ಜಪಿಸಿ ತನ್ನ ಶ್ರೇಯಸ್ಸನ್ನೇ ಮಾಡಿಕೊಳ್ಳುತ್ತಿರುವ ಉಪಾಧ್ಯಾಯನಂತೆ ನಾನು ತಮೋಹರಣವನ್ನು ಜಪಿಸಿ ಕೃತಾರ್ಥನಾಗುವೆನು. ಆ ದಿವ್ಯಭಾನುವು ನಿಮ್ಮ ಹೃದಯಾಂಧಕಾರವನ್ನು ಓಡಿಸಲಿ, ಇತಿ ಶಮ್

# ಶುದ್ಧಿ ಪತ್ರಿಕೆ.

| ಪುಟ. | ಪಂಕ್ತಿ. | ಅಶುದ್ಧ. | ಶುದ್ಧ. |
|---|---|---|---|
| ಉ. ೮ | ೨ | ಯುಗೀನೀತಿಹಾಸ | ಯುಗೀನೇತಿಹಾಸ |
| ೧೬ | ೬ | ಲಿಂಗಧಾರಣಾಲ್ | ಲಿಂಗಧಾರಣಾತ್ |
| ೨೪ | ೧೨ | ಕೃಪಾವಶಾಲ್ | ಕೃಪಾಪಶಾತ್ |
| ೨೪ | ೧೪ | ದೀಕ್ಷಿ | ದೀಕ್ಷೆ |
| ೨೪ | ೧೫ | ಅಪ್ರಕೃತಸ್ಯ | ಅಪ್ರಾಕೃತಸ್ಯ |
| ೨೬ | ೯ | ಪ್ರವರ್ತಿಕ | ಪ್ರವರ್ತಕ |
| ೨೬ | ೧೨ | ಪ್ರವರ್ತಿಕ | ಪ್ರವರ್ತಕ |
| ೩೭ | ೩ | ಪ್ರಾಣತೆಯಿಳಿದು | ಪ್ರಾಣತೆಯಳಿದು |
| ೪೦ | ೭ | ತಪ್ತಿ | ತೃಪ್ತಿ |
| ,, | ೧೨ | ಬುಧಿ | ಬುದ್ಧಿ |
| ೪೩ | ೨೬ | ಬುದಿ | ಬುದ್ಧಿ |
| ೪೪ | ೨೭ | ಉಚಿಷ್ಟ | ಉಚ್ಛಿಷ್ಟ |
| ೪೫ | ೧೨ | ಪದಾರ್ಥಗಳಿಗೆ | ಪದಾರ್ಥಗಳೆ |
| ೪೬ | ೨ | ಕಕ್ಕುಲಾತೆ | ಕಕ್ಕುಲತೆ |
| ೪೭ | ೧೧ | ಧರಸಿ | ಧರಿಸಿ |
| ೪೭ | ೧೪ | ಗ್ರಂಧಿ | ಗ್ರಂಥಿ |
| ೫೧ | ೧೧ | ನಿರ್ವಚನ | ನಿರ್ವಚನಂ |
| ೫೫ | ೨ | ಗ್ರಾಗ್ಯ | ಶಾಕಟಾಯನ |
| ೫೭ | ೧೫ | ಘಙ್ | ಘಞ್ |
| ,, | ೨೦ | ವಹತ್ಯಂತತ। | ವಹತ್ಯಂತತಃ |
| ೬೪ | ೬ | ಮಶಾಂ | ಮತಾಂ |
| ,, | ೧೨ | ಸಂಸ್ಕೃಕ | ಸಂಸ್ಕೃತ |
| ೬೬ | ೮ ರ ಆದಿಯಲ್ಲಿ | ೦ | ಬಲದೇವನು |
| ೭೦ | ೧೧ | ಉತ್ತರೂಪ | ಉತ್ತರರೂಪ |
| ೭೨ | ೧೦ | ಉನೀಲ್ಯ | ಉನ್ಮೀಲ್ಯ |
| ,, | ೧೮ | ಆವರಣದ | ಆವರಣ |
| ,, | ೨೪ | ಯುಡಿ | ಯುದಿ |
| ೭೭ | ೮ | ಹುಟ್ಟ | ಹುಟ್ಟಿ |
| ೮೧ | ೧ | ತಥಾ | ತಥಾ |
| ,, | ೬ | ಕರವರು | ಕರೆವರು |
| ೮೪ | ೧೯ | ಭುಂಜೀತ್ | ಭುಂಜೀತ |
| ೮೬ | ೧೦ | ಬಾರವನೊರನು | ಬಾರವನೆತ್ತುವನು |

| ಪುಟ. | ಪಂಕ್ತಿ. | ಅಶುದ್ಧ. | ಶುದ್ಧ. |
| --- | --- | --- | --- |
| ೮೬ | ೨೨ | ಪರಿಪಾಟ | ಪರಿಪಾಟ |
| ೮೭ | ೬ | ನಂದತಿ | ನಂದಂತಿ |
| ” | ೭ | ಯುಮಂತರೇ | ಯೂಮಂತರೇ |
| ೮೮ | ೨೨ | ಸಿಷೇಧಾಯು | ನನಿಷೇಧಾಯ |
| ೯೦ | ೧೦ | ಆಯುಮುದ್ರ್ಯೋ | ಅಯುಮುರ್ಘೋ |
| ೯೨ | ೧೯ | ದ್ರಾಕ್ಷಿ | ದ್ರಾಕ್ಷೆ |
| ೯೪ | ೧೩ | ದ್ವೇಷಿಸೂಯಾ | ದ್ವೇಷಾಸೂಯಾ |
| ೯೫ | ೫ | ಪ್ರಸಾದಿಂದ | ಪ್ರಸಾದದಿಂದ |
| ೯೬ | ೨೪ | ವಿಲ್ಲದರಿಂದರಿಂದ | ವಿಲ್ಲದರಿಂದ |
| ” | ೨೭ | ವಾಕ | ವಾಕ್ಯ |
| ೯೯ | ೧೫ | ತದ್ಯಾನ | ತದ್ಧ್ಯಾನ |
| ೯೯ | ೨೦ | ಆತಾ | ಆತ್ಮ |
| ೯೯ | ೨೧ | ಬುದಿ | ಬುದ್ಧಿ |
| ೧೦೨ | ೧೧ | ಜಾತಿಯುಳ್ಳಿದು | ಜಾತಿಯುಳ್ಳಿದ್ದು |
| ” | ೨೩ | ಶಿಲಾ | ಶಿಖಾ |
| ” | ೨೭ | ವಿಧಿರತಂತ | ವಿಧಿರತ್ಯಂತ |
| ೧೦೩ | ೧೧ | ಭಕ್ಸ್ಯಾಃ | ಭಕ್ಷ್ಯಾಃ |
| ... | ೨೭ | ಅಕಿಯು | ಅಕ್ಕಿಯು |
| ೧೦೮ | ೯ | ಜೇನತತ್ವ | ಜಿನತತ್ವ |
| ೧೧೦ | ೧೩ | ಸ್ಯೆತಿಕ | ಸ್ಯೆನಿಕ |
| ೧೧೪ | ೫ | ಆಲೇಚಿಸಿದ್ದನೆಂದು | ಆಲೋಚಿಸಿದ್ದನೆಂದು |
| ೧೧೫ | ೫ | ತ್ರೀಪುರ | ತ್ರಿಪುರ |
| ೧೧೬ | ೩ | ಶ್ರೀಮದಲ್ಲನವು | ಶ್ರೀಮದಲ್ಲಮ |
| ೧೧೭ | ೧ | ಶರೀರನೆಂಬ | ಶರೀರನೆಂದು |
| ... | ೫ | ಸಪ್ವ್ಯಾ | ಸವ್ಯಾ |
| ೧೧೮ | ೧೨ | ಪ್ರಭು | ಪ್ರಭು |
| ೧೧೯ | ೧೨ | ನೂಸಳ್ಭಸ್ಮ | ನೂಸಲೊಳ್ಭಸ್ಮ |
| ೧೨೪ | ೯ | ಮರ್ಧತಃ | ಮರ್ಧ್ನತಃ |
| ... | ೯ | ವಾಮಿತ್ರಂ | ನಾಮಿತ್ರಂ |
| ... | ೧೪ | ಮಾಮುವ | ಮಾಡುವ |
| ೧೨೭ | ೧ | ಮುವಿಃ | ಮುನಿಃ |
| ೧೨೯ | ೨೧ | ಕುಲನಸುವರೆ | ಕುಲವನರಸುವರೆ |
| ... | ೨೨ | ಸಕರ | ಸಂಕರ |
| ೧೩೦ | ೯ | ಸಿದಾಂತ | ಸಿದ್ಧಾಂತ |
| ... | ೧೨ | ಅಪುಗಳಲ್ಲಿ | ಅವುಗಳಲ್ಲಿ |
| ೧೩೨ | ೧೬ | ಕಳೆಯುಂಗು | ಕಳೆಯುಲೆಂದು |

## ॥ ಶ್ರೀ ಬಸವಾವತಾರ ॥



ನಮಿಪೆ ಕಂದನೆ ಮುಕ್ತಿಕಂದನೆ। ಶಮನ ಶಮನ ಮತಾಬ್ಧಿ ಚಂದ್ರನೆ।
ಕುಮುದ ಸಖಭೂಷೇಷ್ಟ ಲಿಂಗಾಂಕಿತ ತನೂಜ್ಜ್ವಲನೆ॥
ತಮವಡರಿವರ ವೀರಶೈವವು। ಕುಮತಹರ ಮಸುಳಿಸುತಲಿರ್ಪುದು।
ಕಮಲ ಬಾಂಧವನಂತೆ ಬೆಳಗೈ ಬಸವ ಬಾಲಕನೆ॥



Shri Lingraj Press ... Hubli

# ತಮೋಹರಣ

ಅರ್ಥಾತ್



# ಬಸವಭಾನು.

॥ ಶ್ರೀಗುರುಬಸವಲಿಂಗಾಯನಮಃ ॥

ಜಿಷ್ಣುರ್ಬ್ರಹ್ಮಾಹರಿರಪಿ ಸದಾ ಧ್ಯಾಯಮಾನಾಯಮಂತಃ ।
ಸಾಕ್ಷಾತ್ಕರ್ತುಂ ತ್ರಿಭುವನಗುರುಂ ನೇಶತೇ ಯೋಗಿನೋಽಪಿ ॥
ಸಂಸಾರಾಬ್ಧೇಸ್ತರಣಿಕೃಪಾವೀಕ್ಷಣಂ ತ್ರೀಕ್ಷಣಂ ತಮ್ ।
ವಂದೇಮಾಯಾಪಟಲನಪಟುಂ ಸಲ್ಲಿಲಾಪಾಲಿಮಾಖ್ಯಮ್ ॥೧॥

ಬಕಾರೋಽಯಂ ಬ್ರೂತೇ ಭಜಕಜನತಾಬಂಧಗಲನಮ್ ।
ಸಕಾರಃ ಸಾಯುಜ್ಯಂ ಶಿವಮಹಸಿಸೇವಾಹಿತಧಿಯಾಮ್ ॥
ವಕಾರೋ ವಾಗಾದ್ಯೈರಮಿತವಿಭವಂ ಯಸ್ಯ ಸತತಮ್ ।
ಸ ನಃ ಪಾಯಾನ್ನಿತ್ಯಂ ಹರಗುರು ಚರಾತ್ಮೈಷ ಬಸವಃ ॥೨॥

ಷಡುಪರಿಗತ ತತ್ತ್ವತ್ರಿಂಶಕಾಯಪ್ರದಾ ಯೇ ।
ಷಡಪಿಭುವನಸಮುದ್ರೋರ್ವೀರ್ಣಂಶ್ಚ ಯೇಽಲಾಪಯಂತಿ ॥
ಷಡಿಹ ತನುಭೃತಾಂ ಯೇ ಷೇಷು ಲಿಂಗಾನಿ ದಧ್ಯುಃ ।
ಷಡಹಿತರಹಿತಾಂ ಸ್ತಾನರ್ಚಯೇ ರೇವಣಾದ್ಯಾನ್ ॥೩॥



ಜಗತ್ತಿನಲ್ಲಿ ಸರ್ವವಸ್ತುಗಳನ್ನು ತಿಳಿಯಬಹುದು. ದುರಾತ್ಮರ ಹೃದಯವು ಮಾತ್ರ ತಿಳಿಯಲು ದುಃಶಕವು! ಶ್ರೀ ಬಸವೇಶನ ಚರಣಾರವಿಂದಂಗಳಲ್ಲಿ ನಂಮ ಸಮಾಜವು ತಾಳಿರುವ ಭಕ್ತಿಯು ಉಪಮಿಸಬಾರದು. ಬಸವ ಚರಿತಾಕರ್ಣನದಲ್ಲಿ ನಂಮ ಕುತೂಹಲವು ಅಪರಿಮಿತವು, ಆತನ ಅವತರಣದಿಂದ ಈವರೆಗಾದ ವೀರಶೈವ ಯೋಗಿಗಳು, ತತ್ವವೇದಿಗಳು, ಕವಿಗಳು ಎಂಬುವರೆಲ್ಲರು ಆ ಮಹಾಮಹಿಮನನ್ನು ಕೊಂಡಾಡದೆ ಉಳಿದಿಲ್ಲ. ಗುರುಪೀಠಗಳನ್ನಲಂಕರಿಸಿದವರಲ್ಲಿ ಶ್ರೀಶೈಲಸಿಂಹಾಸನ ಪತಿಯಾದ ಶ್ರೀಪಂಡಿತಾರಾಧ್ಯನೂ ಶ್ರೀಷಡಕ್ಷರನು, ಶ್ರೀಚಿಕ್ಕನಂಜೇಶನು, ವಿರಕ್ತಚೂಡಾಮಣಿಯೂದ ಶ್ರೀ ತೋಟದ ಸಿದ್ಧಲಿಂಗೇಶನು, ಕವಿಸಾರ್ವಭೌಮನಾದ ಭೀಮನು, ಸೋಮನು, ಗುಬ್ಬಿಯ ಮಲ್ಲಣನು, ಹರೀಶ್ವರನು ರಾಘವಾಂಕನು. ವೈರಾಗ್ಯದ ಪುತ್ಥಳಿಯೆ ತಾನಾದ ವೃದ್ಧಷಡಕ್ಷರನು ಇಂತಿವರೆಲ್ಲ ಅಸಂಖ್ಯಾತ ಬಸವಸ್ತಾವಕರಲ್ಲಿ ಹಲವರಾಗಿರುವರು. ವೀರಶೈವನೆನಿಸುವ ಆವನೊಬ್ಬನು ಬಸವೇಶನ ನಿಂದೆಯನ್ನು ಶಾಂತಚಿತ್ತದಿಂದ ಕೇಳಬಹುದೆಂಬುದು ಊಹಿಸಬಾರದ ವಿವರವು. ನಾಲಿಗೆಯಿಂದ ನಿಂದೆಯನ್ನಾಡುವುದಂತು ದೂರವೆ. ಆದರೆ ಕಾಲ ಮಹಿಮೆಯು ವಿಚಿತ್ರವು. ಈಗ ಇದೇ ನಂಮ ಲಿಂಗಾಯತ ಸಮಾಜದಲ್ಲಿ ಉಜ್ಜನಿ ಮುಂತಾದ ಮಠಸ್ಥರಿಂದ ಪೋಷಿತನಾಗಿ ಕಾಶೀನಾಥ ಶಾಸ್ತ್ರಿಯು ಒಂಮೆ ಪರಧರ್ಮದವನಾದ ಆರ್. ಶ್ರೀನಿವಾಸಾಚಾರ್ಯನ ಹೆಸರಿನಿಂದ ಮರೆಮಾಜಿಕೊಳ್ಳುತ್ತ, ಮತ್ತೊಮ್ಮೆ ಹಮ್ಮಿಗಿಯ ಶಾಂತಪ್ಪನ ಹೆಸರಿನಿಂದ ತನ್ನ ಕುರುಹುದೋರುತ್ತ ಆ ಮಂತ್ರಮಯಮೂರ್ತಿಯೂದ ಶ್ರೀ ಬಸವೇಶನ ನಿಂದೆಯನ್ನಾಡುತ್ತಿರುವುದು ಪ್ರಬಲವಾಗಿದೆ. ಭಕ್ತಿ ಮಾರ್ಗಕ್ಕೆ ಶ್ರೀ ಬಸವನೆ ಆದ್ಯಪ್ರವರ್ತಕನಾದುದರಿಂದ ಆತನ ನಿಂದಾಪ್ರವೃತ್ತನು ಜಂಗಮನಿಂದಾ ಪ್ರೋದ್ಯತನಾಗುವದು ಸ್ವಾಭಾವಿಕವು. ಭಕ್ತನಿಂದೆಯು ಬಸವನಿಂದೆಯ ಫಲಿತವೆ. ಭಕ್ತಜಂಗಮನಿಂದೆಯಿಂದ ಗುರುಲಿಂಗನಿಂದೆಗಳು ನಿಷ್ಪನ್ನವಾಗತಕ್ಕವೆ.

ಹನ್ನಿಮ್ಮಗಿ ಶಾಂತಪ್ಪನ ಪ್ರಶ್ನಗಳಲ್ಲಿ ಬಸವಾದಿಭಕ್ತನಿಂದೆಯೂ ಶ್ರೀಮ ದಲ್ಲಮನಿರಂಜನ ಜಂಗಮನಿಂದೆಯೂ ವ್ಯಕ್ತವಾಗಿವೆ. ಈ ಭ್ರಾಂತನು ತಾನು ಕೈಕೊಂಡ ಕಾರ್ಯವು ಗುರುಸೇವೆಯೆಂದು ನಂಬಿರುವನು. ಶ್ರೀ ಪಂಚಾಚಾರ್ಯರ ಪೀಠಸ್ಥರೆಂದು ಹೇಳಿಕೊಳ್ಳುವ ಅನಧಿಕಾರಿಗಳ ಸೇವೆ ಯು ಈ ನಿಂದೆಯಾಗ ಬಹುದು. ಶ್ರೀಪಂಚಾಚಾರ್ಯರ ಸರ್ವಾತತ್ತೋಪದೇಶಕ್ಕೆ ಭಕ್ತಜಂಗಮನಿಂದೆಯು ವಿರುದ್ಧವಾಗಿರುವ್ರದರಿಂದ ಇದು ಪಂ ಚಾಚಾರ್ಯರ ನಿಂದೆಯಲ್ಲದೆ ಅವರ ಸ್ತುತಿಯಲ್ಲ. ಶ್ರೀರೇವಣಾದಿಗಳು, “ ತಸ್ಮಾತ್ಸರ್ವಾಣಿತೀರ್ಥಾನಿಪುಣ್ಯ ಕ್ಷೇತ್ರಾಣಿಪರ್ವತಾನ್ । ಭೌತಿಕಾನಿ ಚ ಸಂತ್ಯಜ್ಯ ಭಕ್ತಮೇವ ಭಜೇತ್ಸುಧೀಃ ॥ ಅಜ್ಞಾನಾದಥವಾಲೋಭಾ ತ್ತೇಷಾಮಪಕೃತಂಚರೇತ್ । ಕಲ್ಪಾವಸಾನಪರ್ಯಂತಂ ಸೋಂಧೇ ತಮ ಸಿ ಮಜ್ಜತಿ ॥ ಭಕ್ತದ್ರೋಹಸಮಂ ಪಾಪಂ ನಭೂತಂ ನಭವಿಷ್ಯತಿ ॥ ” ಎಂಬೀ ಸೂಕ್ತ್ಯಾಗ ಮೋಕ್ತಿಯನ್ನನುಸರಿಸಿ ಭೌತಿಕಂಗಳಾದ ಸರ್ವಕ್ಷೇತ್ರ ತೀರ್ಥಪರ್ವತಂಗಳಿಗಿಂತ ಭಕ್ತನು ಅಧಿಕವಾದ ತೀರ್ಥಸ್ವರೂಪನು. ಭ ಕ್ತದ್ರೋಹನನ್ನು ಅಜ್ಞಾನದಿಂವಾಗಲಿ ಲೋಭದಿಂದಾಗಲಿ ಮಾಡಿದುದಾದರೆ ಕಲ್ಪಾಂತದ ವರೆಗೆಯು ಅಂಧತಮ ಸದಲ್ಲಿ ಮುಳುಗುವನು. ಭಕ್ತ ದ್ರೋಹಕ್ಕೆ ಸರಿಯೆನಿಸುವುದೊಂದು ಪಾಪವಿಲ್ಲವೆಂಧಿಂತು ಬೋಧಿಸಿಲ್ಲವೆ? ಪಾವು ಶಿಷ್ಯನಿಗೆ ಅನುಗ್ರಹಿಸತಕ್ಕ ಲಿಂಗದಲ್ಲಿ ಭೌತಿಕತ್ವವಳಿದು ನಿವೃ ತ್ತ್ಯಾದಿ ಕಲಾಮಯ ತತ್ಪುರುಷಾದಿ ಬ್ರಹ್ಮರೂಪವುಂಟಾಗಿ ಅಂತಹ ಲಿಂಗರೂಪ ಶರೀರದಲ್ಲಿ ಶಿವಚೈತನ್ಯಾಭಿವ್ಯಕ್ತಿಯಾಗಲೋಸುಗ “ ತ ಲ್ಲಿಂಗಂ ಸ್ಥಾಪಯಿತ್ವಾಥ ಚರಪಾದೋದಕೇನಚ । ನಿವೇದ್ಯ ತತ್ಪ್ರಸಾ ದಂ ಚ ಪ್ರಾಪ್ಯಾನುಜ್ಞಾಂ” ಎಂಬೀಸೂಕ್ತ್ಯಾಗಮ ವಚನಕ್ಕನುಸರಿಸಿ ಆವ ಚರಲಿಂಗದ ಪಾದೋದಾಭಿಷೇಕವನ್ನೂ, ಪ್ರಸಾದ ನಿವೇದನವನ್ನೂ ಲಿಂಗಕ್ಕೆ ಮಾಡಿ ಆಚರಲಿಂಗದ ಅನುಜ್ಞೆಯಿಂದ ಲಿಂಗಧಾರಣಂಗೆಯ್ವುದೋ ಅಂತಹ ಚರಲಿಂಗನಿಂದೆಯು ಶ್ರೀರೇವಣಾದಿಗಳಿಗೆ ಸಹ್ಯವಾಗಬಹುದೊ? ಕಲಿಯುಗದಲ್ಲಿ ಶ್ರೀಮದಲ್ಲಮನಲ್ಲದೆ ಬೇರಾರು ಚರಲಿಂಗರೂಪಿಗಳು?

ಇಂತಹ ಭಕ್ತಜಂಗಮ ನಿಂದೆಯನ್ನು ಕೇಳಿದರೆ ಅತಿಪಾಪವು; ಕೇಳಿ ಯಥಾಮತಿ ಉತ್ತರ ಮುಖೇಣ ಖಂಡಿಸದಿದ್ದರೆ ಅತಿತರವಾದಪಾತಕವು.

ಅದರಲ್ಲಿಯೂ ನನ್ನನ್ನುದ್ದೇಶಿಸಿ ಈ ನಿಂದಾತ್ಮಕ ಪ್ರಶ್ನೆಗಳು ಪ್ರಕಟವಾಗಿರುವುದರಿಂದ ಮೌನಧಾರಣವು ರೌರವಾದಿನರಕ ಹೇತುವಾಗುವುದೆಂಬ ಭೀತಿಯಿಂದ ಪಾಪಾತ್ಮರ ನಿಂದೋಕ್ತಿಗಳನ್ನು ಗುರುಚರಲಿಂಗಭಕ್ತರ ಕೃಪಾವಿಶೇಷಲಬ್ಧವಾದ ಒಂದು ಬುದ್ಧಿಯಿಂದ ಅಪಮಾರ್ಜನಂಗೆಯ್ಯಲುಪಕ್ರಮಿಸುವೆನು. ಕುಟಿಲಮತಿಗಳ ನುಡಿಗಳನ್ನು ಎತ್ತಿಮಾತನಾಡುವ ಕಲುಷಕ್ಕೆ ಅಂಜುವೆನಾದುದರಿಂದ ಈ ನಿಬಂಧ ಲೇಖ ಪ್ರಕಾರದಲ್ಲಿಯೆ ಪಾಪಾಕ್ಷೇಪಗಳು ದೂರಾಗುವಂತೆ ವಿಷಯವನ್ನು ಸಂದರ್ಭಗೊಳಿಸಿರುವೆನು.

ಶ್ರೀಬಸವಣ್ಣನು ಕಡುತರನಾದ ವೀರಶೈವನು, ಇಷ್ಟಕ್ಕೂ ಹೆಚ್ಚಿಗೆ, ಲಿಂಗಾಯತನು. ಇಂತಹನು ಭವಿಯಾದ ಬಿಜ್ಜಳನ ಪ್ರಧಾನತ್ವವನೇಕೆ ಕೈಕೊಂಡನು ? ಎಂಬೀ ಪ್ರಶ್ನವು ಒಮ್ಮೊಮ್ಮೆ ಉಪಸ್ಥಿತವಾಗುತ್ತದೆ. ಪ್ರಧಾನತ್ವವೆಂಬುದು ರಾಜನ ಅಂತರಂಗ ಸೇವೆಯಲ್ಲ, ರಾಜನನ್ನು ಧರ್ಮದಂತೆ ಪ್ರಜಾಪಾಲನ ತತ್ಪರನನ್ನಾಗುವಂತೆ ಬುದ್ಧಿಗಲಿಸಿ ರಾಷ್ಟ್ರದಲ್ಲಿ ಧರ್ಮವೃದ್ಧಿಯೂ ತತ್ಪೌರರ ಸುಖಶಾಂತಿಗಳ ಹೆಚ್ಚಳವೂ ಆಗುವಂತೆ ಮಾಡುವ ಅತಿ ಮಹತ್ವದ ಲೋಕಹಿತಕಾರ್ಯವು. ಹಾಗಾದುದರಿಂದಲೆ ವಸಿಷ್ಠಾದಿಗಳು ಪೂರ್ವ ರಾಜರಿಗೆ ಮಂತ್ರಿಗಳಿದ್ದರು. ಮಂತ್ರಿತ್ವದಿಂದ ಆವ ಮಹರ್ಷಿತ್ವಕ್ಕೆ ಆವುದೊಂದು ಕೊರತೆಯೂ ಬರಲಿಲ್ಲ. ಇದು ಧರ್ಮಸೇವೆಯಲ್ಲದೆ ರಾಜನಾದ ಒಬ್ಬಾನೊಬ್ಬ ವ್ಯಕ್ತಿಯ ದಾಸ್ಯವಲ್ಲ. ಇನ್ನು ಬಿಜ್ಜಳನು ಜೈನನಿದ್ದು ಆತನು ಅರಸನಾಗಿದ್ದ ರಾಜ್ಯಶಕಟವನ್ನು ಬಸವನೆಂತು ಸಾಗಿಸಲೊಪ್ಪಿದನು ? ಎನ್ನುವುದಾದರೆ ಮಂತ್ರಿಪದವು ರಾಜನ ಅಂತರಂಗ ಸೇವೆಯಲ್ಲೆಂಬುದರಿಂದಲೆ ಇದಕ್ಕೆ ಉತ್ತರವಾಗಿದೆ. ಜಿನಪಾಂತ ಧರಿತ್ರಿಯಲ್ಲಿರಕೂಡದೆಂದು ಆವ ಧರ್ಮ ನಿಬಂಧನವಿಲ್ಲ.

“ಧರ್ಮೋ ವೈ ವೃಷರೂಪೇಣ ಜಗದಾನಂದಕಾರಕಃ । ಅಷ್ಟಮೂರ್ತೇರಧಿಷ್ಠಾನಂ”— ಧರ್ಮವೇ ವೃಷಭಮೂರ್ತಿಯಾಗಿ ಪರಮಾತ್ಮನಿಗೆ ವಾಹನವಾದನು, ಎಂಬುಕ್ತಿಯಿಂದಲು ॥ ಪುರಾಕಲ್ಪಾವಸಾನೇಚ

ಸರ್ವಂ ಸಂಹೃತ್ಯ ಶಂಕರಃ । ಕೃತ್ವೋವೀಮಾಂ ಸಾಕ್ಷಿಣೀಂ ತಸ್ಮಿನ್ನೇಕ ಏವ ಚಚಾರಹ ॥ ದೃಷ್ಟ್ವಾ ಧರ್ಮಸ್ತಥಾಭೂತಂ ಸರ್ವಸಂಹಾರಕಾರಣಂ । ನಾಶಯೇನ್ಮಾಮಿತಿ ಭಯಾತ್ತಂ ರುದ್ರಂ ಶರಣಂ ಗತಃ । ಅನುಗೃಹ್ಯತು ತಂ ದೇವೋವಾಹನತ್ವೇ ನಿಯುಕ್ತವಾನ್ ॥ ತಸ್ಯ ನಿತ್ಯತ್ವಮಾಜ್ಞಾಪ್ಯ ತೇನಾಯಂ ವೃಷವಾಹನಃ ॥ — ಪೂರ್ವದೊಳು ಕಲ್ಪಾವಸಾನದಲ್ಲಿ ಪರಮಾತ್ಮನು ತನ್ನ ಚಿಚ್ಛಕ್ತಿಯಾದ ಉಮೆಯನ್ನು ಸಾಕ್ಷಿಯಾಗಿಸಿ ಸರ್ವವನ್ನೂ ಸಂಹರಿಸಿ ಏಕಾಕಿಯೆ ಚರಿಸುತ್ತಿರಲು ಧರ್ಮವು ಭಯದಿಂದ ಶಿವನ ಪಾರ್ಶ್ವವನೈದಿತು. ಆಗಲಾ ಪರಶಿವನು ಎಲೈ ಧರ್ಮವೆ ನಿನಗೆಲ್ಲಿಯು ನಾಶವು! ನೀನು ನಿತ್ಯನು. ಎನಗೆ ಸದಾ ವಾಹನವಾಗಿರು ಎಂದಾಜ್ಞಾಪಿಸಿ ತನ್ನ ವಾಹನವಾಗಿರಿಸಿದನು. ಆದರಿಂದ ಈಶನು ವೃಷವಾಹನನಾದನು, ಎಂಬೀ ಸೂಕ್ತ್ಯಾಗಮ ಪ್ರಮಾಣದಿಂದಲು ಧರ್ಮವೆ ವೃಷಭನು, ಆತನೆ ನಂದಿಯು. ಧರ್ಮವೆ ಬಲವಾದುದರಿಂದಲು, ಅದರಿಂದಲೆ ನಿರ್ಮಲಾನಂದವು ದೊರೆಯುವುದರಿಂದಲು, ಸರ್ವಾಭೀಷ್ಟ ಪ್ರದಾಯಕನು, ಸರ್ವಾನಂದಕಾರಕನು, ಎಂಬರ್ಥವನ್ನು ಬೋಧಿಸುವ ಈ ನಾಮಗಳು ಧರ್ಮದೇವತೆಗೆ ಸಹಜವಾಗಿವೆ. "ವೃಷೇಂದ್ರಃ ಪುರ ಏತುನಃ" — ವೃಷಭೇಂದ್ರನೆಂಬ ಧರ್ಮದೇವತೆಯು ನಮ್ಮ ಮುಂದೆ (ಮಾರ್ಗದರ್ಶಕನಾಗಿ) ನಡೆಯಲಿ "ಸ್ವಸ್ತಿದಾ ಅಭಯಂಕರಃ"—ಆತನು ನಮಗೆ ಸ್ವಸ್ತಿಯನ್ನುಂಟುಮಾಡುವನು, ಅಭಯಪ್ರದನು. "ತನ್ನೋ ನಂದಿಃ ಪ್ರಚೋದಯಾತ್"— ವೇದಾಗಮಂಗಳಲ್ಲಿ ಪ್ರಸಿದ್ಧವಾದ ಆ ಶಿವಜ್ಞಾನವನ್ನು ಆನಂದಪ್ರದನಾದ ನಂದೀಶನು ನಮಗಾಗಿ ಪ್ರೇರಿಸಲಿ ಎಂಬಿವು ಮೊದಲಾದ ನಾರಾಯಣೋಪನಿಷದಾದಿ ಶ್ರುತಿಗಳು ಧರ್ಮದೇವತೆಯಾದ ವೃಷಭೇಶನನ್ನು ಪ್ರಾರ್ಥಿಸಿರುವುವು.

ಅಂತಹ ವೃಷಭನ ಪೂರ್ಣಾವತಾರನು ಬಸವನು. ಇದಕ್ಕೆ ಇಂದಿನವರೆಗಾದ ಸಕಲ ವೀರಶೈವ ಧರ್ಮ ತತ್ವಜ್ಞರು ಸಾಕ್ಷಿಯಾಗಿರುವರು. ಕಾಶೀನಾಥನು ಈ ಕೋಲಾಹಲವನ್ನು ಶ್ರೀಪಂಚಾಚಾರ್ಯರ

ಹೆಸರಿನಿಂದ ಅನ್ಯಾಯವಾಗಿ ಎಬ್ಬಿಸಿರುವನಷ್ಟೆ. ಅವರಲ್ಲೊಬ್ಬನಾದ ಶ್ರೀರೇವಣಸಿದ್ಧನು ಸಿದ್ಧರಾಮೇಶನ ವಿಷಯವಾಗಿ ತೋರಿಸಿದ ಭಕ್ತಿಯನ್ನು ನೋಡಿರಿ. "ಎಂದು ಪೇಳುತ್ತಂದು ನಡೆತಂದು ಸುಗ್ಗಲೆಯ | ಮಂದಿರಕೆ ಕರೆದಾ ಮಹಾಸತಿಯ ಜಠರಕ್ಕೆ | ವಂದಿಸಿ ತದಂಗನೆಯ ಕರತಳದ ಭಿಕ್ಷೆಯಂಕೊಂಡು ಜಗದಾರಾಧ್ಯನು || ಒಂದೆರಳ್ತಿಂಗಳಿಂದಂ ಜನಿಯಿಪಂ | ನಂದನಂ ಶಿವಯೋಗಿ ಕುಲಲಲಾಮಂ ಕಾಲ | ಕಂದರ್ಪಹರಂ ಗೆಲ್ವನಿಸ್ಸೀಮನಾ ಸಿದ್ಧರಾಮನೆಂದೆಚ್ಚರಿಸಿದಂ || ರೇ. ೧೨—೧೪ ||—ಸುಗ್ಗಲೆಯ ಜಠರಕ್ಕೆ ಶ್ರೀರೇವಣಸಿದ್ಧೇಶನು ನಮಿಸಿ ಸಿದ್ಧರಾಮನಲ್ಲಿ ತನಗಿರುವ ಭಕ್ತಿಯಂ ತೋರಿಸಿರುವನು. ಈ ಸಿದ್ಧರಾಮನು ನಿಸ್ಸೀಮನೆಂತಲು, ಯೋಗಿಕುಲಲಲಾಮನೆಂತಲು ಕೊಂಡಾಡುವುದರಿಂದ ಆತನ ಘನತೆಯನ್ನು ವ್ಯಕ್ತಿಕರಿಸಿದನು. ಈ ಸಿದ್ಧರಾಮೇಶನು ಚನ್ನಬಸವೇಶನಿಂದ ದೀಕ್ಷೆ ಪಡೆದು ಲಿಂಗಾಸಂಗಿಯಾದನು. ಹೀಗೆ ಲಿಂಗಸಂಗಿಯಾದ ಸಿದ ರಾಮನನ್ನು ಬಸವಾದಿ ಪ್ರಮಥರೊಡನೆ ಪ್ರಭುವು ಅನುಗ್ರಹಿಸಿದನು. ರೇವಣಸಿದ್ಧೇಶನಿಗೆ ಮುಂದಾಗುವ ಇದೆಲ್ಲ ಸಂದರ್ಭವು ತಿಳಿದಿತ್ತಷ್ಟೆ. ಸಿದ್ಧರಾಮನು ಜಠರದಲ್ಲಿದ್ದರು ಆತನಿಗೆ ಈ ಭೂಮಿಯಲ್ಲಿ ೧೪೦೦ ವರ್ಷಗಳವರೆಗೆ ಬಾಳಿದ ವಯೋವೃದ್ಧನೂ ಶಿವಯೋಗಸಂಪತ್ತಿಯಿಂದ ಜ್ಞಾನವೃದ್ಧನೂ ಆದ ತಾನು ನಮಸ್ಕರಿಸಿ ತೋರಿಸಿದ ಭಕ್ತಿಯಿಂದ ಆ ರೇವಣಾರ್ಯ ಮಹಾಗುರುವು, ಸಿದ್ಧರಾಮನನ್ನು ಅನುಗ್ರಹಿಸಿದ ಚನ್ನಬಸವೇಶ್ವರನಲ್ಲಿಯೂ ಅಲ್ಲಮನಲ್ಲಿಯೂ ತನ್ನ ನಿಸ್ಸೀಮ ಭಕ್ತಿಯನ್ನು ತೋರಿಸಿದನೆಂಬಲ್ಲಿಯೂ ಆ ಪ್ರಭುವರನು "ಆಯತಲಿಂಗವಿಡಿದು ಸ್ವಾಯತಲಿಂಗ ಕಾಣಬೇಕು ಸಿದ್ಧರಾಮಯ್ಯಾ ಸ್ವಾಯತಲಿಂಗವಿಡಿದು ಜಂಗಮಲಿಂಗ ಕಾಣಬೇಕು ಸಿದ್ಧರಾಮಯ್ಯಾ, ಜಂಗಮಲಿಂಗವಿಡಿದು ಗುರುಲಿಂಗವಕಾಣಬೇಕು ಸಿದ್ಧರಾಮಯ್ಯಾ ಗುರುಲಿಂಗವಿಡಿದು ಶಿವಲಿಂಗವಕಾಣಬೇಕು ಸಿದ್ಧರಾಮಯ್ಯಾ ಶಿವಲಿಂಗವಿಡಿದು ಪ್ರಸಾದಲಿಂಗವನರಿಯಬೇಕು ಸಿದ್ಧರಾಮಯ್ಯ. ಇಂತೀ ಷಟ್ಸ್ಥಲದಂತವ ಸಂಧಿಸಿ ಒಂದು ಮಾಡಿಕೊಂಡಿಪ್ಪ ಕರಸ್ಥಲದನುವನು. ಗುಹೇಶ್ವರನ ಶರಣ ಸಂಗನ ಬಸವಣ್ಣ ಬಲ್ಲ. ಬೆಸಗೊಂಬಬಾರಾ ಸಿದ ರಾಮಯ್ಯ"

ಶೂನ್ಯ ಸಂಪಾದನೆ ೧೩೪ ಎಂಬ ನುಡಿಯಿಂದ ಶ್ರೀಬಸವನು ವೀರಶೈವ ಪ್ರಥಮಾಚಾರ್ಯನೆಂದು ಮುಂದೆ ಸೂಚಿಪುದು. ಶ್ರೀರೇವಣಸಿದ್ಧೇಶ ನಿಗೆ ಸಂಮತವಿದ್ದಿತೆಂಬುದೂ ಸ್ಪಷ್ಟವಿದೆ. ಹಾಗು ಶ್ರೀಬಸವನು ಸಾಕ್ಷಾದ್ಧರ್ಮಸ್ವರೂಪನೆಂದು ಪ್ರಭುವರನು ಸಿದ್ಧರಾಮನ ಸಮ್ಮುಖ ದಲ್ಲಿ ಹೇಳುವ ಭಾವಿವಚನದಲ್ಲಾದರು ಶ್ರೀರೇವಣಸಿದ್ಧನಿಗೆ ಒಪ್ಪಿಗೆ ಇರಲೆಬೇಕು. ಆ ವಚನವು—"ಮಹಾಘನವು ತನ್ನ ವಿನೋದದಿಂದ ಸಾಕಾರವನೈದಿದರೆ ಧರ್ಮವೆಂಬ ಕಾಯುವ ಧರಿಸಿ ಆಮೂರ್ತಿಗೆ ಆಧಾರ ವಾದಿಯಾಗಿ ಜಗದಕರ್ತಶಿವನೆಂಬ ನಾಮುವಾಯಿತ್ತಲ್ಲ ಬಸವಂಣ ನಿನ್ನಿಂ ದ=ಶೂನ್ಯಸಂಪಾದನೆ ೭-೩೪ ಇದಲ್ಲದೆ ರೇವಣಸಿದ್ಧೇಶ್ವರ ಪುರಾಣಕ ರ್ತೃವಾದ ಬೊಮ್ಮರಸನು "|ಪರಮಶಿವ ಕವಿತಿಲಕರೆನಿಪ ಹಂಪೆಯಹರೀ| ಶ್ವರನ ಮುಗ್ಗೆಯ ಮಾಯಿದೇವರನು ಕೆರೆಯುಪ । ದ್ಮರಸರಂ ಪಾಲ್ಕುರಿ ಕೆ ಯೂರಾಧ್ಯ ಸೋಮೇಶನಂ ಚಿತ್ತದೊಳಗೆ ನೆನೆದು ॥ ಶರಣೆಂದು ರಚಿಸಲು ಜ್ಜುಗಿಸಿದೆನು ರೇವಣೇ। ಶ್ವರಗುರೂತ್ತಮನ ಸುಚರಿತ್ರದೀ ಕಾವ್ಯಮಂ| ಪರಿಪೂರ್ಣವಾಗಿ ತೋರ್ಕಿದರೊಳು ವಿರಕ್ತಿಭಕ್ತಿಜ್ಞಾನವಿಂತಿದೆಂದು ॥ ರೇ ೧-೧೫ ॥ ಎಂದು ಹಂಪೆಯ ಹರೀಶ್ವರ. ಮುಗ್ಗೆಯ ಮಾಯಿದೇವ. ಪಾಲ್ಕುರಿಕೆಯ ಆರಾಧ್ಯ ಸೋಮೇಶ ಇಂತಿ-ವರೆಲ್ಲರನು ಪರಮಶಿವಕವಿ ಗಳೆಂದು ಕೊಂಡಾಡಿರುವನು. ಮುಗ್ಗೆಯ ಮಾಯಿ ದೇವನೂ ಪಾಲ್ಕುರಿಕೆ ಯ ಸೋಮಾರಾಧ್ಯನೂ, ಬಸವನು ಧರ್ಮಕ್ಕೆ ಆದರ್ಶರೂಪನೆಂದು ಕೊಂ ಡಾಡಿರುವವರು. ಪಾಲ್ಕುರಿಕೆ ಸೋಮೇಶನು ಆಂಧ್ರಭಾಷೆಯಲ್ಲಿ ವೃಷ ಭಾವತರಣವೆಂಬ ಬಸವಪುರಾಣವನ್ನು ಬರೆದುದೇ ಭೀಮ ಕವಿಯಿಂದ ಕ ನ್ನಡಕ್ಕೆ ಪರಿವೃತ್ತಿಯನ್ನು ಹೊಂದಿತು. ಆಪುರಾಣದಲ್ಲಂತು ಬಸವನು ಅನಾದಿವೃಷಭನ ಅವತಾರವೆಂದೆ ಹೇಳಿಯದೆ ಮತ್ತು ಧರ್ಮವೆ ಶಿವನಿಗೆ ವೃಷಭಾಕಾರದಿಂದ ವಾಹನವಾದುದೆಂದು ಪ್ರತಿ ಪಾದಿಸಿಯದೆ. ಮುಗ್ಗೆ ಯ ಮಾಯಿದೇವನು "ಜಯುಬಸವೇಶ ಭಕ್ತ ಜನಭಾಗ್ಯ ಶುಭೋದ ಯ ವೀರಶೈವನಿ । ಊಯ ಪರಮಾವತಾರ ಶರಣಾಗತ ರಕ್ಷಕ ಚಿದ್ಘನ ಪ್ರಭಾ । ಮುಯುಜಗದಾದಿದೇಶಿಕ ಪುರಾತನಪುಂಗವ ಶಾಂಭವೈಪುರಾ । ಶ್ರ

ಯ ಜಯ ಸೋಮನಾಥ ಜಯ ದೇವ ಜಯಾವಿರತಂತಿವಾಧವಾ ॥೨॥ ಎಂದಿಂತು ಶ್ರೀಬಸವನನ್ನು ಬಣ್ಣಿಸಿರುವನು. ಇಂತಹ ಕವಿಗಳಿಗೆ ಪರಮ ಶಿವಕವಿಯೆಂಬ ವಿಶೇಷಣವನ್ನು ಕೊಟ್ಟಿರುವ ಬೊಮ್ಮರಸಕವಿಗೆ ಅವರು ಬಸವನ ಸಂಬಂಧದಿಂದ ಬರೆದ ಉಕ್ತಿಗಳು ಮಾನ್ಯವಿದ್ದುವೆಂಬುದು ನಿಸ್ಸಂದೇಹವು.

ರೇವಣ ಸಾಂಗತ್ಯದ ಹದಿನೈದನೆಯ ಸಂಧಿಯಲ್ಲಿ ರೇವಣಾರ್ಯನು ಸುಗ್ಗವ್ವೆಯ ಜಠರದಲ್ಲಿ ಸಿದ್ಧರಾಮನಿರಲು ಆದಕ್ಕೆ ನಮಿಸಿದನೆಂದು "ಸುಗ್ಗವ್ವೆಯು ಹಸ್ತದ ಭಿಕ್ಷವನುರೆ । ಹಿಗ್ಗುತ ಸಲಿಸಿ ಆ ಸತಿಯ ಬೆಗ್ಗಳ ಪೂರ್ಣೋದರಕೆ ಭಸಿತವಿಟ್ಟು । ಭರ್ಗನ ಸುತನ ನಮಿಸಿದನು ॥ ಹೆದರಿ ಸುಗ್ಗವ್ವೆ ರೇವಣಗೆ ವಂದಿಸಿ ಬೆದರುತ ಬಿನ್ನೈಸಿದಳು । ಸದಮಲ ಹೃದಯ ನೀನೆರಗಿದ ವಿಧವನು । ಪದುಳದಿ ಪೇಳೆಂದಳಬಲೆ ॥ ಉಸುರಿದನುಂಟು ನುಡಿಯ ಪಸುತೃಷೆಗಳ । ಮುಸಕದೊಳಗೆ ದೆಸೆಗೆಡದೆ । ವಿಷಮನಿರೋಧ ನಿದ್ರೆಗಳಿಲ್ಲದ ವರ । ಕುಲದ ಶಿಶುವೆನಿಸುವನು ॥ ನಿನ ಗರ್ಭದೊಳುದಿಸುವ ಸುಜ್ಞಾನಸಂ । ಪನ್ನನೆನಿಪ ಯೋಗೀಂದ್ರ ॥ ನನ ಈ ನುಡಿ ಸುಗ್ಗವ್ವ ಅರಿದಿರುಯೆಂದು । ಚನ್ನರೇವಣ ಪೇಳಲೊಡನೆ । ಎಂಬ ಪದ್ಯಗಳಿಂದ ಹೇಳಿರುವನು.

ಗುರುರಾಜ ಚರಿತ್ರವೆಂಬ ಆರಾಧ್ಯರ ಚರಿತ್ರರೂಪವಾದ ಚಿಕ್ಕನಜೇಶಕೃತಿಯುಂಟು. "ಬರೆವೆನಾಚಾರ್ಯರುದ್ಭವವನಾ ಪರಮ ಸ । ದ್ಗುರುವಂಶವಂ ಶಿವನ ಪಂಚವಿಂಶತಿಲೀಲೆ । ಹರಪೂಜೆಯುಂ ಪಂಡಿತಾರಾಧ್ಯರೊರೆದ ಗಣಸಾಹಸ್ರನಾಮಂಗಳಂ ॥ ಧರೆಯಲ್ಲಿ ಮತ್ತೆ ಶಿವಕೃಪೆವಡೆ ನೂತನರ । ವರಪುರಾತನರ ಕಥೆಗಳ ಸಿದ್ಧನಂಜೇಶ । ಗುರುನಿರೂಪದೆಯೊಲಿದು ಗುರುರಾಜ ಚಾರಿತ್ರದೊಳು ಬುಧರ ಬಗೆಬಯಸಲು ॥ ಈ ಪದ್ಯದಲ್ಲಿ ಕವಿಯು ಆಚಾರ್ಯರ ಉದ್ಭವವನ್ನೂ ಅವರ ವಂಶವನ್ನೂ ವಂಶವೆಂದರೆ ರಕ್ತಸಂಬಂಧವಲ್ಲ ಶಿಷ್ಯಪರಂಪರೆಯು. ಆಚಾರ್ಯರಿಗೆ ಹೆಂಡಿದ್ದಿಲ್ಲೆಂದು ವಾದಿಗಳು ಹೇಳುವುದರಿಂದ ರಕ್ತಸಂಬಂಧವಿರಲು ಅವಕಾ ವಿಲ್ಲ. ಹೆಚ್ಚಿನ ವಿಸ್ತಾರವನ್ನು ಸುಪ್ರಭೇದ ಪ್ರಭಂಜನದಲ್ಲಿ ನೋಡು

ವರ್ಣಿಸುವುದು ಈ ಕೃತಿಯ ಉದ್ದೇಶವೆಂದು ಹೇಳಿರುವನು. ಗ್ರಂಥಾವತಾರದಲ್ಲಿ ಶ್ರೀಬಸವೇಶನ ಸ್ತುತಿಯನ್ನು ಮಾಡಿರುವನು. ಇದೇ ಕವಿಯು ರಚಿಸಿದ ರಾಘವಾಂಕ ಕಾವ್ಯದಲ್ಲಂತು; ಈಗ ಪಾಪಾತ್ಮರು ನಿಂದಿಸುತ್ತಿರುವ ಸರ್ವ ಶರಣವೃಂದವನ್ನೂ ನಮಸ್ಕರಿಸಿರುವನು. "ಬಸವನಾಮಂ ಪೋಪತಿಮಿರಾತುಲಾರ್ಯಮಂ|ಬಸವನಾಮಂದುರಿತವನಧಿ ಬಡಬಾನಲಂ । ಬಸವನಾಮಂ ಕಾಲಭೂಹಲಂ ಭವಕದಲಿಮತ್ತೇಭಪರತತ್ತ್ವವು । ಬಸವನಾಮಂ ಕಾಮಕಾಂತಾರಪ್ರಳಯಾಗ್ನಿ । ಬಸವನಾಮಂ ಶರಣ ಜನದ ಮನದಭಿರಾಮ । ಬಸವನಾಮಂ ಮಂತ್ರಪಟಲದಲಲಾಮವೆಂದಾನು ಬಸವನನುತಿಸುವೆಂ ||೧-೧೦|| ಇದರ ಮುಂದಿನ. ೧೧-೧೩೩ನೆಯ ಪದ್ಯಗಳಲ್ಲಿ ಸಿದ್ಧರಾಮ, ಪಂಡಿತಾರಾಧ್ಯ, ಮಹಾದೇವಿಯಕ್ಕ ಮಡಿವಳ. ರೇವಣ. ಮರುಳಸಿದ್ಧ ಪಡಿಹಾರಿ. ಮುದ್ದಯ್ಯ ಘಟ್ಟಿವಾಳ ಕರತಲದನಾಗಿದೇವ, ಶ್ರೀಬಸವನರ್ಧಾಂಗಿ ನೀಲಾಂಬೆ ಮೊದಲಾದವರಿಗೆ ನಮಸ್ಕೃತಿಗಳುಂಟು. ಆಚಾರ್ಯರ ಪುರಾಣವನ್ನು ಬರೆದ ಈ ಚಿಕ್ಕ ನಂಜೇಶನು. ಪಂಚವಂಣಿಗೆಯ ಬಗೆಯಾತನು; "ಆಚಾರ್ಯರೇವಣಾಸಿದ್ಧೇಶಮರುಳಸಿದ್ಧಾಚಾರ್ಯ ರಾಮಿದೇವಾಚಾರ್ಯ ಗುರುಪಂಡಿ । ತಾಚಾರ್ಯ ಚೌಕಮಧ್ಯದಿನಿಂದ ಪಂಚವಂಣಿಗೆ ಸಿದ್ಧನಂಜೇಶ್ವರ । ಸ್ವಾಚಾರ್ಯ ಪದ ಸರಸಿರುಹಮಧುಪ ಚಿಕ್ಕನಂಜಾಚಾರ್ಯ" । ಎಂದು ತನ್ನ ನಾಮುವನ್ನು ಹೇಳಿಕೊಂಡಿರುವನು, ಆದರಿಂದೀತನು ತಾನೆ ಆಚಾರ್ಯ ಪಟ್ಟಾಭಿಷಿಕ್ತನಿರಬೇಕು.

ದನುಗೂರ ಮಠದ ಶ್ರೀಷಡಕ್ಷರಸ್ವಾಮಿಯು ವೃಷಭೇಂದ್ರವಿಜಯುವನ್ನು ಮಹಾಭಕ್ತಿಪುರಃ ಸರವಾಗಿ ರಚಿಸಿದುದರಲ್ಲಿ. ಬಸವನನಾದಿಮೂರ್ತಿಯೆನಿಪಂ ಬಸವಂಜಗದಾದಿಕಾರಣಂ। "ಬಸವನನಂತಕೀರ್ತಿ ಬಸವಂ ಭವಮೇಘ ಮಹಾಸಮೀರಣಂ । ಬಸವನಶೇಷಬಂಧು ಬಸವಂ ಶಿವಭಕ್ತಮುಖಾಂಬುಜಾರುಣಂ । ಬಸವನ ಖರ್ವಗರ್ವ ಪರವಾದಿ ಜನಾಂಬು ಜಮತ್ತವಾರಣಂ ॥ ಬಸವನ ನಾಮಂ ನೆನೆವುತಂ ಬಸವೇಶನ ಕೀರ್ತನಂಗಳಂ ಪಸರಿಸಿ ಪಾಡುತಂ ಬಸವನುಜ್ವಲ ಮೂರ್ತಿಯ ನೋಲ್ಪು ಜಾನಿಸು |

ತ್ರೈಸೇವನರಂಗೆ ಜನ್ಮತತಿಯುಂಟೆ ಜಡಸ್ಥಿತಿಯುಂಟೆ ಪಾತಕ । ಪ್ರಸರಮ
ದುಂಟೆ ಮೃತ್ಯುಭಯಮುಂಟೆ ಮಧಾಂಧತೆಯುಂಟೆ ಧಾತ್ರಿಯೊಳ್ ॥ ವ
ಪುರುದ್ಯುತ್ಪ್ರಭೆಯಿಂದೆ ಬಿಂದು ವಿಲಸನ್ನಾದಂ ಕಣಿತ್ಕಾರದಿಂ । ಲಪನ
ಪ್ರದ್ಯುತಿ ಸಾರದಿಂ ಕಳೆ ಚಲನ್ನೇತ್ರತ್ರಿಭಾಗಂಗಳಿಂ । ದುಪಮಾತೀತಗು
ಣತ್ರಯಂ ಬಸವನಿಂ। ದಂದಾದವೆಂದೈಪೇ। ಳ್ದಪರಾರ್ಯರ್ಪ್ರತೀನೊ ತಾನೆ
ಪರಬೊಂಮ್ಮಂದಲ್ಪವೃಷಾಧೀಶ್ವರಂ ॥ ಪ್ರಮಥಪ್ರಥಮಾಚಾರ್ಯಂ । ಕು
ಮತತಮಃ ಸೂರ್ಯನಾರ್ಯನ ತುಳಿತಕಾರ್ಯಂ ॥ ಎಂದನೇಕ ವಿಧಗ
ಳಿಂದ ಸ್ತುತಿಸಿರುವುದು ಲೋಕಪ್ರಸಿದ್ಧವು. ಷಡಕ್ಷರನು ಶ್ರೀರೇಣು
ಕ ಪರಂಪರೆಯಾತನು. ಕವಿಕರ್ಣ ರಸಾಯನ ಶಿವಾಧಿಕ್ಯ ಭಕ್ತಾಧಿಕ್ಯ
ಗಳನ್ನು ಗೀರ್ವಾಣ ವಾಣಿಯಿಂದ ರಚಿಸಿರುವನು. ಗುರುಪಟ್ಟಾಭಿಸಿಕ್ತನು

ಪಟ್ಟಾಭಿಷೇಕವಿಧಿಗಾಗಿ ಕಾಶೀನಾಥನು ಗುರುವು ಆದರಿ ಸುತ್ತಬಂ
ದ ವೀರಶೈವಾಚಾರ ಕೌಸ್ತುಭದಲಿ "ಭೂವಹಾ ಬಿಜ್ಜಳಶಾಂಬರೀಮತಿ
ತರಾಮತ್ಮಪ್ರಭಾವೇಣವೈ । ಯಃಕೋಲಂ ಕಷಣಂ ನ್ಯವಾಯರದಥ ಸ್ಥೀ
ತಾನುಕಂಪಾನಿಧಿಃ ॥ ತಂ ಭೂಯೋಽಖಿಲ ವೀರಶೈವ ಮತಭೂಮಂದಾರ
ಭೂಮೀರುಹಂ । ವಂದೇಹಂ ಬಸವೇಶ್ವರಂ ಯಮವತಾಂ ಸದ್ಬ್ರಹ್ಮವಿ
ದ್ಯಾಗುರುಂ ॥ " ಪ್ರ-೧-೮ ॥ ಎಂದಿಂತಾಗಿ ಬಸವೇಶನನ್ನು ಸ್ವಪ್ರಭಾವ
ದಿಂದ ಬಿಜ್ಜಳನ ಮೊಯೆಯನ್ನುಗೆದ್ದಾತನೆಂತಲು. ದಯಾಮಹಾಸಾಗರ
ನೆಂತಲೂ. ವೀರಶೈವಮತಕ್ಕೆ ಭೂಗತಕಲ್ಪವೃಕ್ಷವೆಂತಲು ಇಂದ್ರಿಯ ನಿ
ಗ್ರಹವನುಳ್ಳ ಸಾಧಕರಿಗೆ ಬ್ರಹ್ಮವಿದ್ಯಾಗುರುವೆಂತಲು ಮೌನಪ್ಪ ವಿದ್ಯಾ
ಸನು ಕೊಂಡಾಡಿರುವನು.

ಇಂತನೇಕಪ್ರಮಾಣಂಗಳಿಂದ ಪಂಚಾಚಾರ್ಯರ ಪರಂಪರೆಯಲ್ಲಿ
ಬಂದ ಈ ಮತದ ಗುರುಗಳಿಗೆ ಬಸವನ ನಾಮವು ಮಂತ್ರರೂಪವಾಗಿದ್ದಿ
ತೆಂತಲು. ಬಸವನನ್ನುವರು ಸಾಕ್ಷಾದ್ಧರ್ಮರೂಪನೆಂದು ಭಾವಿಸುತ್ತಿದ್ದ
ರೆಂತಲು. ಬಸವನೆ ಪರಬ್ರಹ್ಮದವತಾರವೆಂದು ನಂಬುತ್ತಿದ್ದರೆಂತಲು ಸಿದ್ಧ
ವಾಗುತ್ತದೆ. ಆದುದರಿಂದ ಈ ಲಿಂಗಾಯತ ಧರ್ಮಕ್ಕೆ ಬಸವನು ಪ್ರಥ
ಮಾಚಾರ್ಯನು ಮಂತ್ರಮೂರ್ತಿಯು ಧರ್ಮಸ್ವರೂಪನು ಎಂದೆಂಬುದು

ಪೂರ್ವ ಗುರು ಪರಂಪರೆಯಿಂದಲೆ ಸಿದ್ಧವಾಗುತ್ತದೆ. ಆಸಂಪ್ರದಾಯಕ್ಕ ನುಸರಿಸಿ ಬಸವೇಶ್ವರನ ಪಾದದಲ್ಲಿ ನನ್ನ ಭಕ್ತಿಯು ನಿರಂತರವಾಗಿರಲಿ'

ಅನಾದಿವೃಷಭೇಶನೆ ಸ್ವರೂಪವಾದ, ಆತನು ಪಂಚಾಕ್ಷರ ಮಂತ್ರದ ಪ್ರಥಮ ಬೀಜವಾದ ನಕಾರವಾಚ್ಯ ನಿವೃತ್ತಿಕಲೆಗಧಿ ದೇವತೆಯಾಗಿ ಆ ಮಂತ್ರ ದ್ರಷ್ಟಾರರಾದ ಋಷಿಗಳ ಅಂತಃಕರಣದಲ್ಲಿ ಹೊಳಸಿದ, ಶೈಲಾದಿಯೆಂಬ ಭಿಧಾನದಿಂದ ಸನತ್ಕುಮಾರಾದಿಗಳಿಗೆ ಆಚಾರ್ಯನಾಗಿ ಬೋಧಿಸಿದ, ಕಲಿಯುಗದಲ್ಲಿ ಬಸವಾಬಿಧಾನದಿಂದ ನಮಗೆಲ್ಲ ನಡೆದು ತೋರಿಸಿದ, ವೀರಶೈವ ಅಥವಾ ಲಿಂಗಾಯತ ಸಿದ್ಧಾಂತವೇನು? ಇದರ ಲಕ್ಷಣವನ್ನು ಆಗಮ ವಚನಗಳಿಂದ ಹೇಳುವೆನು. "ವೀತರಾಗಾದಿ ದೋಷತ್ವಾದಾತ್ಮತತ್ವವಿಚಾರಣಾದ್ । ವಿಕಲ್ಪರಹಿತಂ ಶೈವಂ ವೀರಶೈವಮಿತಿಸ್ಮೃತಂ" ಸೂಕ್ಷ್ಮಾಗಮ ೭-೩೩ ಯಥಾವೀರೊ ರಣೇಶೂರೋ ವೀರಶೈವಮತೇ ತಥಾ । ಭಕ್ತ್ಯಾ ವೀರೋ ನ ವೈರೇಣ ನ ಬಲೇನ ಚ ಕಾರ್ಯತಃ । ಪಾ॥ ೭।೩೯. "ವೀರತ್ವಂ ನಾಮದೇವೇತಿ ಯಥಾ ವೀರೋ ರಣೇ ಭಟಃ । ತಥಾ ಮತೇ ಚ ಸದ್ಭಕ್ತ್ಯಾ ವೀರೋ ವೈರಾಗಲಿತೋ ದೃಢಾತ್ ॥ ಪಾ-೮।೭. ಬೇಕೆನಿಸಿದ ಪದಾರ್ಥದಲ್ಲಿ ರಾಗವು, ತನಗೆ ಅರ್ಥಾತ್ ತಾನೆಂದು ಅಭಿಮಾನಿಸಿದ ದೇಹಪ್ರಾಣಮನಂಗಳಿಗೆ ಬೇಡಾದ ಪದಾರ್ಥದಲ್ಲಿ ದ್ವೇಷವು, ಎಂಬೆರಡರಿಂದಲು, ಆತ್ಮಾನಾತ್ಮ ವಿವೇಕವಿಲ್ಲದರಿಂದಲು, ಪ್ರಾಕೃತ ಪ್ರಪಂಚವು ತೋರುವುದು. ಪ್ರಕೃತಿಯೆಂದರೆ ಜೀವಾತ್ಮನ ಭೋಗ್ಯವಸ್ತುಗಳ ಮತ್ತು ಭೋಗಸಾಧನವಾದ ದೇಹೇಂದ್ರಿಯಕರಣಂಗಳ ಮತ್ತು ಭೋಗಭೂಮಿಯಾದ ಭುವನಂಗಳ ಉತ್ಪತ್ತಿಗೆ ಬೀಜವು. ಈ ಬೀಜವು ತನ್ನ ಕಾರ್ಯಗಳು ಉತ್ಪತ್ತಿ ಮುಖವಾಗುವಂತೆ ವಿಕಾರ ಹೊಂದಬೇಕಾದರೆ ರಾಗಾದಿ ಪಂಚ ಕಂಚುಕಗಳಿಂದ ಆವೃತನಾದ, [ಅಂದರೆ, (೧) ಕಲೆಯುಂಬ ಕಿಂಚಿತ್ಕರ್ತೃತ್ವ; (೨) ನಿಯತಿಯೆಂಬ ಆವಕರ್ಮವಾವನದೊ ಅವನದರ ಫಲವನುಂಡೇ ತೀರಬೇಕೆಂಬ ಸ್ವಕೀಯ ಕರ್ಮಫಲಾವಶ್ಯ ಭೋಕ್ತೃತ್ವ; (೩) ವಿದ್ಯೆಯೆಂದರೆ ಸಾಂಸಾರಿಕ ವಿಷಯುಗಳಾದ ಪದಾರ್ಥಗಳನ್ನು ತಿಳುಕೊಳ್ಳು

ವಷ್ಟು ಮಾತ್ರ ಶಕ್ತಿವುಳ್ಳಾಗಿರುವಿಕೆಯೆಂಬ ಕಿಂಚಿಜ್ಜ್ಞತ್ವ; (೪) ರಾಗವೆಂದರೆ ಸಾಮಾನ್ಯವಾಗಿ ವಿಷಯಗಳು ತನಗೆ ಬೇಕೆಂಬ ಅವುಗಳಲ್ಲಿ ಆಸಕ್ತಿ; (೫) ಕಾಲವೆಂದರೆ ನಿನ್ನೆ, ಇಂದು, ನಾಳೆ ಎಂಬ ವ್ಯವಹಾರಕ್ಕೆ ಅಂದರೆ ಲೋಕದಲ್ಲಿ ಆವುದಾದರೊಂದು ಕಾರ್ಯವು ನಿನ್ನೆ ಆದಿತು. ಇಂದು ಆದವುದು. ನಾಳೆ ಆಗುವುದು. ಎಂಬವ್ಯವಹಾರಕ್ಕೆ ಹೇತುವಾದ ಕಾರಣ ವಿಶೇಷ. ಇಂತಿವೆಲ್ಲಯ್ದರಿಂದ ಮುಸುಕಲಾದ ] ಜೀವನ ಸನ್ನಿಧಿಯು ಬೇಕು. ಪ್ರಧಾನವೆಂಬ ಈ ಪ್ರಕೃತಿಗೂ ಪುರುಷನೆಂಬ ಜೀವಾತ್ಮನಿಗೂ ಈಶನು ಪರಸ್ಪರ ಸಂಯೋಗವನುಂಟು ಮಾಡುವನು. "ಕ್ಷರಾತ್ಮಾನಾ ವೀಶತೇಬೇವ ಏಕಃ ॥" ಶ್ವೇತಾಶ್ವತರ. "ಪ್ರಕೃತಿಪುರುಷತತ್ವಗಳೆರಡು ಈಶ್ವರನಿಗಧೀನವು." ಹೀಗೆ ಪಂಚಕಂಚುಕಾವೃತನಾದ ಜೀವನಿಗೆ ಈಶನು ಅನುಗ್ರಾಹಕನಾಗಲು ರಾಗವು ಅಳಿಯ ಹತ್ತುತ್ತದೆ. ಆ ರಾಗವು ಅಳಿಯ ಹತ್ತಿದಂತೆ ಆತ್ಮಜ್ಞಾನವಾಗಹತ್ತುತ್ತದೆ. ಆಗ ರಾಗದ್ವೇಷಾದಿಗಳಿಂದುಂಟಾದ ಭವಬಂಧವಳಿಯುವುದು. ಈ ಬಂಧವು ಪ್ರಕೃತಿಕಾರ್ಯಗಳಲ್ಲಿಯೂ ಪಕೃತಿಯಲ್ಲಿಯೂ ಜೀವನ ತೊಡಕು. ಅದಕ್ಕೆಯೆ ವಿಕಲ್ಪವೆನ್ನುವರು. ವಿಕಲ್ಪವೆಂದರೆ ವಿರುದ ಜ್ಞಾನವೆಂಬರ್ಥ. ಅಂದರೆ ಶಿವನನ್ನು ಕಾಣದೆ ವಿಷಯಗಳನ್ನು ಕಾಣುವುದು. ಈ ವಿಕಲ್ಪಕ್ಕೆ ಅಕಲ್ಪವು ಮೂಲವು. ಅಕಲ್ಪವೆಂದರೆ ಜ್ಞಾನರೂಪನಾದ ಆತ್ಮನು ಜ್ಞಾನಸ್ವರೂಪವನ್ನು ಮರೆತು ವಿಷವ್ಯಾಪ್ತನಂತೆ ನಿಶ್ಚೇಷ್ಟನಾಗಿರುವುದು. ಇದೇ ಮಲಪಾಶವು. ವಿಕಲ್ಪದಲ್ಲಿ ಮಾಯಾ ಕರ್ಮಗಳು ಹುದುಗಿರುತ್ತವೆ. ಮಾಯೆಯೆಂದರೆ ಹಲವು ತೋರಿಕೆಗಳು ತೋರುವುದು. ಕರ್ಮವೆಂದರೆ ಆತ್ಮನು ಬಹಿರ್ಮುಖನಾಗಿ ಪ್ರವರ್ತಿಸುವುದು. ಈ ಮೂರು ಪಾಶಗಳಿಂದ ಅಂದರೆ ಅಕಲ್ಪವಿಕಲ್ಪಗಳಿಂದ ಬದ್ಧನಾದ ಜೀವನು. ಜಾತ್ಯಾಯುಭೋಗ ವಿಶಿಷ್ಟವಾದ ಸಂಸಾರದಲ್ಲಿ ತೊಳಲುವನು. ಶಿವಾನುಗ್ರಹವೆಂಬ ಶಾಂಭವದೀಕ್ಷೆಯಿಂದ ಇಷ್ಟ ಪ್ರಾಣಭಾವಲಿಂಗ ಸಂಯೋಗವಾಗಲು ವಿಕಲ್ಪಾಕಲ್ಪಗಳಳಿದು ಶಿವಾತ್ಮಜ್ಞಾನವು ಉಂಟಾಗಿ ಜಾತ್ಯಾದಿ ಭ್ರಾಂತಿಗಳು ನೀಗಿ ಶಿವಾತ್ಮಕನಾಗಿರುವುದೇ ಲಿಂಗಾಂಗಸಾಮರಸ್ಯ. ಇದೇ ವೀರಶೈವ ಸಿದ್ಧಾಂತ ಸ್ವರೂಪ.

ಈ ಸ್ವರೂಪಸಿದ್ಧಿಗೆ ಬೇಕಾದ ಸಾಧನವನ್ನು ಮೇಲುದಾಹರಿಸಿದ ಪಾರಮೇಶ್ವರಾಗಮ ವಾಕ್ಯವು ಅರುಹುತ್ತದೆ. ಅದೇನಂದರೆ ವೀರತ್ವವು ಅಥವಾ ಬಲವು "ನಾಯಮಾತ್ಮಾ ಬಲಹೀನೇನ ಲಭ್ಯಃ" ಮು. ೩-೦ ಎಂಬ ಮುಂಡಕ ಶ್ರುತಿಯು ಇದೇ ಅರ್ಥವನ್ನು ಹೇಳುತ್ತದೆ. ಬಲವೆಂದರೆ ಪಶುಬಲವಲ್ಲ, ಆತ್ಮಬಲವು. ಅರ್ಥಾತ್ ಶಿವಭಕ್ತಿಯಿಂದ ಆವಿರ್ಭವಿಸುವ ಶಕ್ತಿಯು. ಅದೇ ಜಗತ್ತಿನಲ್ಲಿರುವ ಸರ್ವ ಶಿವೇತರ ಪದಾರ್ಥಗಳಿಂದಲು ವಿರಕ್ತಿಯು ಅಥವಾ ವೈರಾಗ್ಯವು.

ಶ್ರೀಗುರುಹರಚರಾತ್ಮಕ ನಂಮ ಬಸವಂಣನು ವೀರಶೈವದ ಈ ತತ್ತ್ವವನ್ನು ಎಷ್ಟು ಸೊಗಸಾಗಿ ಬಂಣಿಸಿರುವನು ನೋಡಿರಿ. ರಾಗದಿಂದಲೆ ಸರ್ವಸಂಸಾರವು ಸರ್ವವಿಕಲ್ಪವು ಈ ವಿಕಲ್ಪಕ್ಕೆ ಆಕಲ್ಪವೆಂದರೆ ತನ್ನಲ್ಲಿದ್ದ ಶಿವಚೈತನ್ನವನ್ನು ಆವರಿಸಿದ ಮಲವೆ ಮೂಲವು ಎಂಬುದನ್ನು ತೋರಿಸುವ ಶ್ರುತಿಸಂಮಿತವಾದ ಬಸವ ವಚನ "ತಮೋಂಧ ಘನ ಜ್ಯೋತಿಕಿರಿದೆನ್ನ ಬಹುದೆ? ಮರುಹು ಘನ ನಿಂಮ ನೆನೆವಮನಕಿರಿದೆನ್ನ ಬಹುದೆ?" ಪಿಂಡಜ್ಞಾನ ಸ್ಥಳದ ವಚನ ೬. ಈ ವಚನದಲ್ಲಿ ಮರುಹು ತಮೋಂಧ ಅಂದರೆ ದಟ್ಟಾದ ಕತ್ತಲೆಗೆ ಹೋಲಿಸಲ್ಪಟ್ಟದೆ. ದಟ್ಟಾದ ಕತ್ತಲೆಯಲ್ಲಿ ಜೀವಾತ್ಮನ ನೇತ್ರಜ್ಞಾನಕ್ಕೆ ಸ್ವರೂಪತಃ ನಾಶವಿರುವುದಿಲ್ಲ. ಕತ್ತಲೆಯಿಂದ ಆಜ್ಞಾನಶಕ್ತಿಯ ವ್ಯಾಪಾರವು ಕುಂಠಿತವಾಗಿರುತ್ತದೆ. ಅದರಂತೆಯೆ ಮರುಹಿನಲ್ಲಿ ಆತ್ಮನ ಶಿವಾತ್ಮಕ ಜ್ಞಾನಕ್ರಿಯೂ ಶಕ್ತಿಯು ಸ್ವರೂಪತಃ ನಾಶವನ್ನು ಹೊಂದಿರುವುದಿಲ್ಲ. ಮರುಹಿನ ಬಲದಿಂದ ಅಡಗಿರುತ್ತದೆ. ಕತ್ತಲೆಯಲ್ಲಿ । ರೂಪದ್ರವ್ಯಪ್ರಕಾಶಕವಾದ ನೇತ್ರವು ಅಂಧತಾಪರಿಭೂತವಾಗಿರುವುದರಿಂದ ದ್ರವ್ಯ ಪ್ರಕಾಶಕವಾಗುವುದಿಲ್ಲ. ಅದರಂತೆಯೆ ಮರುಹಿನಲ್ಲಿ ಆತ್ಮನ ಶಿವಾತ್ಮಕಜ್ಞಾನಕ್ರಿಯೆಗಳ ಸರ್ವವ್ಯಾಪಕತ್ವ. ಕಾಲಾನವಚ್ಛಿನ್ನತ್ವ ಎಂಬಿವುಗಳು ಪ್ರಕಟವಾಗದೆ ಗೂಢವಾಗಿರುತ್ತವೆ. ದೀಪಪ್ರಕಾಶವು ಆಗುತ್ತಲೆ ನೇತ್ರೇಂದ್ರಿಯದ ಚೈತನ್ಯವು ಪಟುವಾಗಿ ರೂಪಪ್ರಕಾಶವನ್ನುಂಟು ಮಾಡುತ್ತದೆ. ಅದರಂತೆಯೆ ಶಿವಾನುಗ್ರಹದಿಂದ ಲಿಂಗಾಂಗ ಸಂಯೋಗವಾಗಿ ಮಲ ನಿವಾರಣವಾಗಲು ಮೊದಲು ಅವ್ಯಕ್ತ

ವಾದ ಆತ್ಮನ ಜ್ಞಾನಕ್ರಿಯಾಶಕ್ತಿಯೆಂಬ ಆತ್ಮವಿಮರ್ಶವಾಗಿ ಅಂದರೆ ಆತ್ಮನ ಪರಿಪೂರ್ಣ ಸತ್ಯಜ್ಞಾನಾನಂತ್ಯಗಳ ಎಚ್ಚರವಾಗಿ ಅವಿರಳತಿವೈಕ್ಯದಿಂದ ವ್ಯವಹರಿಸುವ ಜೀವನ್ಮುಕ್ತಿಯುಂಟಾಗುವುದು. ಇನ್ನು ಅಕಲ್ಪದಿಂದ ಆತ್ಮನ ಮರೆಯಾದಂತೆ ವಿಕಲ್ಪದಿಂದ ಸಂಸಾರದ ತೊಡಕುಂಟಾಗುವುದನ್ನು ವಿವರಿಸುವ ವಚನವಿದು. "ಭವಬಂಧನ ಪಾಶವಾದ ಕಾರಣವೇನಯ್ಯ? ಹಿಂದಣ ಜನ್ಮದಲ್ಲಿ ಲಿಂಗವ ಮರೆತೆನಾಗಿ ಹಿಂದಣ ಸಿರಿಯಲ್ಲಿ ಜಂಗಮವ ಮರೆತೆನಾಗಿ." "ಲಿಂಗವ ಮರೆತೆನಾಗಿ ಎಂಬುದು ಮಾಯಾಪಾಶವನ್ನೂ ಜಂಗಮವ ಮರೆತೆನಾಗಿ ಎಂಬುದು ಕರ್ಮ ಪಾಶವನ್ನೂ" ತೋರಿಸುತ್ತದೆ. ಲಿಂಗವೆಂಬ ಸಕಲ ಜಗದುದಯ ಸ್ಥಿತಿ ಪ್ರಳಯಗಳಿಗೆ ಕಾರಣವಾದ ಶಿವತತ್ವವನ್ನು ಮರೆತುದರಿಂದ ಮಾಯಾ ಅಂದರೆ ಹಲವು ತೋರಿಕೆಗಳು ತೋರುವುದು, ಅಥವಾ ಈ ದೇಹದಲ್ಲಿ ಸ್ಥಿತಿಯೆಂಬುದುಂಟಾಗುತ್ತದೆ. ನೋಡಿರಿ ಈ ಜಗತ್ತಿನಲ್ಲಿ ತುಂಬೆಲ್ಲ ಶಿವಾತ್ಮನಾದ ತಾನೆ ವ್ಯಾಪಿಸಿರುವೆನೆಂಬ ಸಮ್ಯಗ್‌ಜ್ಞಾನವುಳ್ಳಾತನೆಂದಾದರೊಂಮೆ ಹಲವು ಪದಾರ್ಥಗಳನ್ನು ವಿಕಲ್ಪಿಸುವನೆ? ತಾನು ಈ ದೇಹ ಮಾತ್ರ ಸ್ಥಿತನೆಂದು ಭಾವಿಸಬಹುದೊ?—ಶಿವನೆ ಅತಿಥಿರೂಪನಾದ ಜಂಗಮನು. ಆ ಜಂಗಮನ ಸೇವೆಯೆ ಪರಮ ಪದವಿಯೆಂಬುದು ಲಿಂಗದ ಅರುಹುಳ್ಳವನಿಗೆ ಸ್ವಾತ್ಮಾನುಭವದಿಂದ ತಿಳಿಯುತ್ತದೆ. ಆತನು ಜಂಗಮ ಸೇವೆಯಲ್ಲಿಯೆ ಮಗ್ನನಾಗುವನು. ಜಂಗಮಕೈಂಕರ್ಯವು ತನ್ನ ಸ್ವಾತ್ಮ ಸುಖಾನುಭವಕ್ಕೆ ಪೋಷಕವಾಗಿರುತ್ತದೆ. ಲಿಂಗದ ಮರಹುಳ್ಳಾತನು ತಾನು ದೇಹಾತ್ಮ ಮಾತ್ರ ಮತಿಯಾದುದರಿಂದ ಆ ಮತಿಗನು ಸರಿಸಿ ತನಗಿರುವ ಕೊರತೆಗಳನ್ನು ದೂರೀಕರಿಸಬೇಕು. ಫಲಪದವಿಗಳನ್ನು ಹೊಂದಬೇಕು ಎಂಬ ಲಾಲಸೆಯು ಬೆನ್ನು ಬಿಡದಾತನಾಗಿ ಆಯಾ ಕೊರತೆಗಳನ್ನು ದೂರೀಕರಿಸಲಿಕ್ಕೂ ಆಯಾ ಫಲಗಳನ್ನು ಹೊಂದಲಿಕ್ಕೂ ಅನೇಕ ವ್ಯಾಪಾರಗಳಲ್ಲಿ ತೊಡಗುವನು. ಹಾಗು ಆಯಾ ಕರ್ಮಗಳ ಫಲವಾದ ಸಿರಿಯನ್ನು ಹೊಂದುವನು. ಪದಾರ್ಥಗಳು ಪಂಚಭೂತಗಳಿಂದ ಉತ್ಪನ್ನವಾದುವಾದರು ಅನಂತವಾಗಿರುವುದರಿಂದಲು, ಆತ್ಮನು ತಾನೆಂದು ಭಾ

ವಿಸಿಕೊಂಡ ದೇಹವು, ಬಳಿಕದು ಸ್ಥೂಲವಿರಲಿ, ಸೂಕ್ಷ್ಮವಿರಲಿ, ಕಾರಣ ವಿರಲಿ, ಭೌತಿಕವಿರಲಿ. ಮಾಯಿಕವಿರಲಿ, ಅನಂತ ಸ್ವಾಭಾವಿಕ ದೋಷ ಯುಕ್ತವಾದುದಿದ್ದುದರಿಂದಲು ಈ ಫಲಾಪೇಕ್ಷೆಗಳೂ ನ್ಯೂನತಾ ಪರಿ ಹಾರೇಚ್ಛೆಗಳೂ ಅನಂತವಿರುವುವು. ಆದರಿಂದ ಕರ್ಮಪಾಶವಾದರು ಬಲು ದಪ್ಪವಾಗುವುದು. ಮಲಮಾಯಾಕರ್ಮಪಾಶಗಳ ಸ್ವರೂಪ ವನ್ನು ಒಂದಾನೊಂದು ಗ್ರಂಥದಲ್ಲಿ ಹೇಳಿರುವ ವಿವರವು:—"ಗೋಪಿತ ಸ್ವಮಹಿಮ್ನೋಽಸ್ಯ ಸಂಮೋಹಾದ್ವಿಸ್ಮೃತಾತ್ಮನಃ । ಯಃ ಸಂಕೋಚಃ ಸ ಏವಾಸ್ಯ ಅಣವೋಮಲ ಉಚ್ಯತೇ ॥ ತತಃ ಷಟ್ಕಂಚುಕವ್ಯಾಪ್ತಿ ವಿಲೋ ಪಿತ ನಿಜಸ್ಥಿತೇಃ । ಭೂತದೇಹೆ ಸ್ಥಿತಿರ್ಯಾಸೌ ಮಾಯೀಯೋ ಮಲ ಉ ಚ್ಯತೇ ॥ ಯದಂತಃ ಕರಣಾಧೀನಾರಬ್ಧಿಕರ್ಮೇಂದ್ರಿಯಾದಿಭಿಃ । ಬಹಿ ರ್ವ್ಯಾಪ್ರಿಯತೇಕಾರ್ಮಂ ಮಲಮೇತಸ್ಯ ತನ್ಮತಂ ॥" ಈ ಕರ್ಮಮ ಲದಿಂದ ಸ್ವರ್ಗನರಕಗಳೂ ಅನೇಕ ಜಾತ್ಯಾಯುರ್ವಿಶಿಷ್ಟ ಜನ್ಮಗಳೂ ಉಂಟಾಗುವುವು. ಗುರುಲಿಂಗಜಂಗಮ ಸೇವೆಯೆ ಧನದ ಪ್ರಯೋಜನ ವೆಂದು ತಿಳಿಯದೆ ಇದ್ದುದರಿಂದ ಭೌತಿಕಾತ್ಮ ಭರಣಕ್ಕಾಗಿ ಅನಂತ ವಿಧ ವಾಗಿ ತೊಳಲಾಡುವುದೇ ಕರ್ಮಗತಿಯು. ಇದರಿಂದೊದಗುವ ಸಂಸಾ ರದ ಯಾತನೆಗಳನ್ನು ತಾಳಲಾರದೆ ಪರಮೇಶನ ಮೊರೆಹೊಗಲು ಸಂಸಾರ ಹೇಯದಲ್ಲಿ ದೃಢತರವಾದ ವಿರತಿಯಾಗಿ ಲಿಂಗಧಾರಣಾದಿ ಧರ್ಮಪ್ರಾ ಪ್ತಿಯಿಂದ ಕ್ರಮೇಣ ಮನದಲ್ಲಿ ನೆನಹು ಘನವಾಗಿ ಮರಹು ಅಳಿಯು ವುದು.

ಈ ಸಿದ್ಧಾಂತಕ್ಕೆ ವೀರಶೈವ ಸಿದ್ಧಾಂತವೆಂತಲು, ಲಿಂ ಗಾಯತ ಸಿದ್ಧಾಂತವೆಂತಲು ಹೆಸರು. ಈ ಹೆಸರುಗಳು ಒಂ ದೆ ಪದಾರ್ಥವನ್ನು ವಿಷಯೀಕರಿಸುತ್ತಿದ್ದರು, ಬ್ರಾಹ್ಮಣ ಪರಿ ವ್ರಾಜಕ ಶಬ್ದಗಳಂತೆ ಸ್ವಲ್ಪ ವಿಶೇಷವುಳ್ಳುವಾಗಿವೆ. ಬ್ರಾ ಹ್ಮಣನು ಎಂದು ಮಾತನ್ನಾಡಿದರೆ ಒಂದು ಲಕ್ಷಣವುಳ್ಳವನು ಎಂಬರ್ಥವಾಗುತ್ತದೆ. ಪರಿವ್ರಾಜಕನೆಂದರೆ ಬ್ರಾಹ್ಮಣ ಲಕ್ಷ ಣವುಳ್ಳವನಾಗಿ ವಿಶೇಷವಾದ ಮತ್ತೊಂದು ಸನ್ಯಾಸಿತ್ವವೆಂಬ ಲಕ್ಷಣವು

ಳ್ಳಾತನೆಂಬರ್ಥವು ನಿಷ್ಪನ್ನವಾಗುತ್ತದೆ. ಪರಿವ್ರಾಜಕನು ಬ್ರಾಹ್ಮಣನೆ ಆದರೆ ಬ್ರಾಹ್ಮಣನೆನ್ನುವ ಪ್ರತಿಯೊಬ್ಬನು ಪರಿವ್ರಾಜಕನಿರಲಿಕ್ಕಿಲ್ಲ. ಅದರಂತೆಯೆ ಲಿಂಗಾಯತನು ವೀರಶೈವನೆ ಆದರೆ ವೀರಶೈವನು ಲಿಂಗಾಯತನಿರಲಿಕ್ಕಿಲ್ಲ. ಶಿವಭಕ್ತಿಮಾರ್ಗದಲ್ಲಿ ವೀರತ್ವವುಳ್ಳಾತನು ವೀರಶೈವನು. ತತ್ರ ಸಪ್ತವಿಧೇಷ್ವೇಷು ವೀರಶೈವಂ ಮಹತ್ತರಂ । ಶೈವೇ ವೀರತ್ವಮೂತ್ರೇಣ ಕಿಂಪುನರ್ಲಿಂಗಧಾರಣಾತ್॥ ಪಾ.ಪ.೧.೧೦೨. ಈ ಸಪ್ತವಿಧ ಶೈವಗಳಲ್ಲಿ ಶೈವದಲ್ಲಿ ವೀರತ್ವ ಅಥವಾ ದೃಢತರವಾದ ನಿಷ್ಠೆಯೆಂಬುದರಿಂದಲೆ ವೀರಶೈವವು ಅಧಿಕವಾದುದು. ಅದರೊಡನೆ ಲಿಂಗಧಾರಣವು ಇದ್ದುದಾದರೆ ಕೇಳುವುದೇನು! ಎಂಬ ಪಾರಮೇಶ್ವರ ವಚನವು ವೀರಶೈವನು ಕ್ವಚಿತ್ತಾಗಿ ಲಿಂಗಧಾರಣ ವಿಲ್ಲದಿರಬಹುದೆಂದು ತಿಳಿಸುತ್ತದೆ. ಲಿಂಗಧಾರಣವು ಶುದ್ಧಶೈವನಿಗಾದರು ಆಗ ಬಹುದು. ಆದರೆ ಲಿಂಗಲೋಪದಲ್ಲಿ ಪ್ರಾಯಶ್ಚಿತ್ತವನ್ನು ಹೊಂದದೆ ಪ್ರಾಣಪರಿತ್ಯಾಗವನ್ನೆ ಮಾಡುವನೆಂಬ ವೀರತ್ವವಿಲ್ಲ. ನೋಡು:— ಗುರುಣಾದತ್ತಲಿಂಗಂತು ಕರಪೀಠೇಪಿ ವಾ ಯಜೇತ್ । ಪ್ರಮಾದಾತ್ಪತಿತೇ ಲಿಂಗೇನಷ್ಟೇ ದಗ್ಧೇ ಹೃತೇಽಪಿ ವಾ । ವಿರೋಧಿನಾ ತಸ್ಕರೇಣ ಯೇನ ಕೇನ ಚದೂಷಿತೇ । ಗುರುಪಾದಾಂಬುಜಂ ಸ್ಮೃತ್ವಾ ಜಪ್ತ್ವಾಘೋರಂ ತದಾಜ್ಞಯಾ । ತಲ್ಲಿಂಗಮೇವ ವಾನ್ಯದ್ವಾ ಧಾರಯೇತ್ಪೂಜಯೇತ್ಪುನಃ ॥ ಪ್ರಮಾದಾನ್ನಿಯಮೇಲುಪ್ತೇ ಮೂಲಪಂಚಾಕ್ಷರಂಜಪೇತ್ । ಪ್ರಾಯಶ್ಚಿತ್ತಮಿದಂ ದೇವಿ ವ್ರತಾಚಾರಾದಿಲೋಪನೇ ॥ ಶುದ್ಧಶೈವಮಿದಂ ಪ್ರೋಕ್ತಂ ವೀರಶೈವಮಥಶೃಣು ॥ ಸೂಪ. ೭೯-೩೨ ಎಂಬೀ ಪ್ರಮಾಣದಿಂದ ಸ್ವಾತ್ಮಾರ್ಥ ಪೂಜೆಗೆ ಶುದ್ಧಶೈವನು ಧರಿಸಿದ ಲಿಂಗವು ಹೋದರೆಯಾಗಲಿ ಕಳ್ಳರ ಕಡ್ಡೊಯ್ದರೆಯಾಗಲಿ ಪ್ರಾಯಶ್ಚಿತ್ತಪೂರ್ವಕವಾಗಿ ಅನ್ಯಲಿಂಗವನ್ನು ಧರಿಸುತ್ತಾನೆಂದು ತಿಳಿಯುತ್ತದೆ. ಆದುದರಿಂದ ವೀರಶೈವತ್ವಪೂರ್ವಕ ಲಿಂಗಧಾರಣವುಳ್ಳಾತನು ಲಿಂಗಾಯತನು. ಇನ್ನು ಲಿಂಗಾಯತ ಶಬ್ದದ ಉಪಪತ್ತಿಯನ್ನು ನೋಡುವ. ಇಂತಹ ಶುದ್ಧ ಸಂಸ್ಕೃತ ಶಬ್ದದ ಉಪಪತ್ತಿಯನ್ನು ಗರ್ವವಿಶೇಷದಿಂದ, ಕೇಳುವ ಮತ್ತು ಅದನ್ನು

ಗಾಯತ ಮೊದಲಾದ ಶಬ್ದಗಳಿಗೆ ಹೋಲಿಸುವ ಪಾಮರನು ಎಲ್ಲಿಯು ದೊರೆಯಲಿಕ್ಕಿಲ್ಲ. ಆದರೆ ದೂಷಕರ ಪ್ರಶ್ನದ ಉತ್ತರವನ್ನೀಯದಿದ್ದರೆ ಕೆಲವರಿಗೆ ಸಂಶಯು ಬರ ಬಹುದಾದುದರಿಂದ ಉಪಪತ್ತಿ ವಿವೇಚನಂಗೆಯ್ಯುವುದು ಅವಶ್ಯವಾಗಿದೆ. ಒಂದು ಅತಿಸುಲಭ ಉಪಪತ್ತಿಯನು ಹೇಳುವೆನು. ಲಿಂಗೇನ ಆಯತಃ ಲಿಂಗಾಯತಃ ಲಿಂಗದಿಂದ ಆಯತನು ಅಂದರೆ ವಿಸ್ತಾರವನ್ನು ಹೊಂದಿದವನು. ವೀರಶೈವ ಶಾಸ್ತ್ರದಲ್ಲಿ ಅಥವಾ ಸಕಲ ಶೈವಶಾಸ್ತ್ರದಲ್ಲಿ ಆಣವಮಲವು ಹೇಳಲ್ಪಡುತ್ತದಲ್ಲ; ಆಣವವೆಂದರೆ ಜೀವನಿಗೆ ಅಣುತ್ವವನ್ನು ಅಥವಾ ಸಂಕೋಚವನ್ನುಂಟು ಮಾಡುವುದೆಂಬರ್ಥ. ಈ ಮಲದಿಂದ ಆತ್ಮನು ಅಣುವು, ಸಂಕುಚಿತನು, ಆಗಿರುವನು ಆದರಿಂದ ಪಶುವೆಂಬ ಸಂಜ್ಞೆಯುಳ್ಳ ಈ ಆತ್ಮನಿಗೆ. ಅಣುವೆಂಬ ಸಂಕೇತವು ಉಂಟು. ಇದು "ಅಥಾನಾದಿಮಲಾಪೇತಃ ಸರ್ವಕೃತ್ಸರ್ವದೃಕ್ಛಿವಃ । ಪೂರ್ವಂ ವ್ಯತ್ಯಾಸಿತಸ್ಯಾಣೋಃ ಪಾಶಜಾಲಮಪೋಹತಿ" ಕರ್ಮದ ಮತ್ತು ಮಲಗಳ ಪಾಕಾನಂತರದಲ್ಲಿ ಸರ್ವಕತೃತ್ವ ಸರ್ವಜ್ಞತ್ವಗಳಿಂದ ವಿಶಿಷ್ಟನಾದ ಶಿವನು ಪೂರ್ವದಲ್ಲಿ ವಿಪರೀತಭಾವವನ್ನು ಹೊಂದಿದ ಅಣುವಿನ (ಪಶು ಜೀವನ) ಪಾಶಗಳ ಸಮುದಾಯವನ್ನು ದೂರೀಕರಿಸುತ್ತಾನೆ. "ಭುಕ್ತಿಂ ಮುಕ್ತಿಮಣೂನಾಂ ಸ್ವವ್ಯಾಪಾರೇ ಸಮರ್ಥತಾಂ ದಾನಂ । ಜಡವರ್ಗಸ್ಯವಿಧತ್ತೇ ಸರ್ವಾನುಗ್ರಾಹಕಃ ಶಂಭುಃ ।" ತತ್ವಪ್ರಕಾಶಿಕಾ । ಸರ್ವಾನುಗ್ರಾಹಕನಾದ ಪರಮಾತ್ಮನು ಅಣುಗಳಿಗೆ ಭುಕ್ತಿಮುಕ್ತಿಯನೂ ಜಡವರ್ಗಕ್ಕೆ ಸ್ವವ್ಯಾಪಾರಗಳಲ್ಲಿ ಸಾಮರ್ಥ್ಯವನೂ ಉಂಟುಮಾಡುತಾನೆ. ಎಂಬೀ ಪ್ರಮಾಣದಿಂದ ಸಿದ್ಧವಾಗುತ್ತದೆ. ಹಾಗು ಈ ಅಣುತ್ವರೂಪ ಬಂಧವು ನಿವೃತ್ತಿಯಾಗಲು ಆತ್ಮನ ಸ್ವರೂಪವು ವಿಕಸಿತ ಅಥವಾ ವಿಸ್ತಾರವಾದುದಾಗುತ್ತದೆಂದು ಸರ್ವ ಶೈವಶಾಸ್ತ್ರಗಳು ಹೇಳುತ್ತವೆ. ಮೃಗೇಂದ್ರವಾಕ್ಯವು— ನಾಧ್ಯಕ್ಷೇಣಾಪಿತಲ್ಲಿಂಗಂ ನಶಾಬ್ದಮಪಿ ಶಾಂಕರಂ । ಜ್ಞಾನಮಾಭಾತಿ ವಿಮಲಂ ಸರ್ವದಾ ಸರ್ವವಸ್ತುಷು ॥ ಮಲನಿವೃತ್ತಿಯಾಗಿ ದೃಕ್ಕ್ರಿಯಾತ್ಮಕ ಆತ್ಮಶಕ್ತಿಯು ಪ್ರತಿಬಂಧರಹಿತವಾದುದಾಗಿ ಸರ್ವಕಾಲದಲ್ಲಿಯು ಸರ್ವ ವಸ್ತುಗಳಲ್ಲಿ ಶಂಕರಾತ್ಮಕ ಜ್ಞಾನವು ಸ್ಫುರಿಸುತ್ತದೆ. ಅದು

ಪ್ರತ್ಯಕ್ಷದಂತೆ ನೇತ್ರಾದಿಯಿಂದುದಾದದಲ್ಲ. ಅನುಮಾನದಂತೆ ಧೂಮ ಮೊದಲಾದ ಚಿಹ್ನೆಗಳಿಂದ ಹುಟ್ಟಿದುದಲ್ಲ. ಆತ್ಮಸ್ವರೂಪವಾದ ಜ್ಞಾನವು. ಹೀಗೆ ಲಿಂಗದಿಂದ ಸ್ವರೂಪವಿಸ್ಮೃತಿಯನ್ನು ಇಷ್ಟಪ್ರಾಣಭಾವ ಲಿಂಗಯೋಗದಿಂದ ಹೊಂದಿದಾತನು ಲಿಂಗಾಯತನು.

ಬೇರೆ ವಿಧದಿಂದಲು ಲಿಂಗಾಯತ ಶಬ್ದವನ್ನು ವ್ಯುತ್ಪಾದಿಸಬಹುದು. ಲಿಂಗಾಯತ ಶಬ್ದದಲ್ಲಿ ಲಿಂಗ ಮತ್ತು ಆಯತವೆಂಬವೆರಡು ಅಂಶಗಳಿರುವವು. ಇವರಲ್ಲಿ ಆ ಎಂಬುದು ಉಪಸರ್ಗವು, ಯತ ಎಂಬುದು ಧಾತುಸಾಧಿತವು. ಯತೀ, ಪ್ರಯತ್ನಪಡು ಎಂಬರ್ಥದ ಧಾತುವಿಗಾಗಲಿ, ಯತ ಸಂಸ್ಕರಿಸು ಎಂಬರ್ಥದ ಧಾತುವಿಗಾಗಲಿ ಅಚ್ ಎಂಬ ಪ್ರತ್ಯಯವು ಹತ್ತಿ ಯತ ಎಂಬ ರೂಪವಾಗುತ್ತದೆ. ಈ ಅಚ್ ಪ್ರತ್ಯಯವು ಕರ್ತೃಬೋಧಕವು. ಆದುದರಿಂದ ಯತಃ = ಪ್ರಯತ್ನಪಡುವನು ಅಥವಾ ಸಂಸ್ಕಾರವನ್ನು ಮಾಡುವನು ಎಂಬರ್ಥವು. ಯತ ಶಬ್ದವನ್ನು ಯಮ ನಿಗ್ರಹಿಸು ಅಥವಾ ಯಮ = ಆವರಿಸು ಎಂಬರ್ಥದ ಧಾತುವಿಗೆ ಕ್ತ ಪ್ರತ್ಯಯವು ಸೇರಿ ಆದಂತೆಯಾದರು ಸಾಧಿಸಬಹುದು. ಆಙ್ ಎಂಬ ಉಪಸರ್ಗವು ಸಮಗ್ರವಾಗಿ ಅಥವಾ ಸರ್ವಾಯವಸಂಬಂಧದಿಂದ ಎಂಬ ಅರ್ಥವುಳ್ಳದು. ಆದುದರಿಂದ ಲಿಂಗಾಯತ ಶಬ್ದಾರ್ಥವು ಲಿಂಗವನ್ನು ತನುತ್ರಯದಲ್ಲಿ ಹೊಂದಲಿಕ್ಕೆ ಪ್ರಯತ್ನಶೀಲನೆಂತಲೂ, ಲಿಂಗವೇ ತನಗೆ ಸಂಸ್ಕೃತಿಸುವುದಾಗಿ ಉಳ್ಳಾತನೆಂತಲೂ ಲಿಂಗದಿಂದ (ಸಾಂಸಾರಿಕ ವಿಷಯಗಳಲ್ಲಿ) ಉಪರತಿ ಹೊಂದಿದವನೆಂತಲೂ ಸರ್ವಾಯವಗಳಲ್ಲಿಯೂ ಲಿಂಗವು ಆವರಿಸಿದವನು ಎಂತಲೂ ಆಗುವುದು. [ಯತೀ ಪ್ರಯತ್ನೇ ಅಥವಾ ಯತ ಉಪಸ್ಕಾರೇ ಇತಿ ಧಾತು. "ನಂದಿಗ್ರಹಿಪಚಾದಿಭ್ಯೋ ಲ್ಯುಣಿನ್ಯಚಃ" ಇತಿ ಸೂತ್ರೇಣ ಪಚಾದಿಭ್ಯೋ ಅಚ್ ಪ್ರತ್ಯಯಃ ಪಚಾದಿರಾಕೃತಿಗಣಃ ತಸ್ಮಾತ್ ಆಯತತೇ. ಆಙ್ಪೂರ್ವಾತ್ಯತತೀತಿವಾ ಆಯತಃ, ಯಮ ಪರಿವೇಷಣೇ ಯಮು ಉಪರಮೇ ಇತಿವಾ ಧಾತುಃ ಪರಿವೇಷಣಮಿಹ ಪರಿವೇಷ್ಟನಂ ತಸ್ಮಾತ್ ಕ್ತ ಪ್ರತ್ಯಯಃ ಕ್ತಕ್ತವತೂ ನಿಷ್ಠಾ, ಅನುದಾತ್ತೋಪದೇಶವನತಿತನೋತ್ಯಾದೀನಾಮನುನಾಸಿಕಲೋಪೋ ಝಲಿಕ್ಙಿತಿ "ತತೋ

ಯತ ಇತಿ ರೂಪಸಿದ್ಧಿಃ ಆಙತ್ರ ಅಭಿವ್ಯಾಪ್ತೌ ಅಭಿವ್ಯಾಪ್ತಿಶ್ಚ ಸರ್ವಾವಯವ ಸಂಬಂಧಃ ಸಾಕಲ್ಯಂವಾಸಾಕಲ್ಲಿಂಗಾಯ ಆಯತತೇ, ಲಿಂಗಂ ಆಯತಃ ಯಸ್ಯ ಸಃ, ಲಿಂಗೇನ ಆಯತಃ ಇತಿವಾ ಲಿಂಗಾಯತಃ] ಈ ಬಗೆಯಾಗಿ ಲಿಂಗಾಯತ ಶಬ್ದದ ಸಂಸ್ಕೃತ ರೂಪಸಿದ್ಧಿಯನ್ನು ಮಾಡಿಕೊಟ್ಟ ಬಳಿಕ ಆದರ ಪ್ರಯೋಗವನ್ನು ಹಳೆಯ ಗ್ರಂಥಗಳಲ್ಲಿ ಕೇಳಲಿಕ್ಕೆ ಕಾರಣವಿಲ್ಲ. ಏಕೆಂದರೆ ಅದು ಈಗ ಸದ್ಯಕ್ಕೆ ಪ್ರಯೋಗದಲ್ಲಿರುವುದೆ ಹಳೆಯ ಪ್ರಯೋಗಕ್ಕೆ ಸಾಕ್ಷಿಯಾದೆ. ಅವುದಾದರೊಂದು ಶಬ್ದವು ಸಂಸ್ಕೃತವೊ ದೇಶ್ಯವೊ ಅಥವಾ ಅಪಭ್ರಂಶವೋ ಪರಕೀಯಭಾಷಾಗತವೊ ಎಂಬುದಕ್ಕೆ ವ್ಯಾಕರಣವೂ ಉಪಪತ್ತಿಯೂ ಪ್ರಮಾಣವಾಗಿರುತ್ತವೆ. ಈಗ ನಾನು ಮಾಡಿದ ಸಂಸ್ಕೃತೋಪಪತ್ತಿಯನ್ನು ವಾದಿಯು ಖಂಡಿಸದೆ ಲಿಂಗಾಯತ ಶಬ್ದವು ಸಂಸ್ಕೃತವಲ್ಲೆಂದು ಸಾಧಿಸಲಿಕ್ಕೆ ಬಾರಲಾರದು. ಆದರು ವಾದಿಯು ಉಪಪತ್ತಿಯಷ್ಟಕ್ಕೆ ಸಂತುಷ್ಟನಾಗದಿದ್ದರೆ ಅರ್ಥಾತ್ ಉಪಪತ್ತಿ ಪರೀಕ್ಷಣ ಸಮರ್ಥನಿಲ್ಲದರಿಂದ ಪ್ರಯೋಗವನ್ನು ಬೇಡುತ್ತಿದ್ದರೆ ಅದೂ ಉಂಟು ಇದಕ್ಕೆ ಆಗಮಗಳಲ್ಲಿ ಪ್ರಯೋಗವು ದೊರೆಯುತ್ತದೆ, ಶ್ರೀಮತ್ಕಾಮಿಕೋತ್ತರದಲ್ಲಿ. ಆಜ್ಞಾದಿಸಪ್ತವಿಧದೀಕ್ಷೆಗಳು ಕಥಿತವಾಗಿವೆ. ಅವುಗಳಲ್ಲಿ ಆಯತ ಅಥವಾ ಲಿಂಗಾಯತ ಮತ್ತು ಲಿಂಗಸ್ವಾಯತವೆಂಬ ಅಂತಿಮ ದೀಕ್ಷೆಗಳು ಉಂಟು-ಲಿಂಗಮಾದಾಯಗುರುಣಾ ಸ್ವಯಮಭ್ಯರ್ಚ್ಯಯಥಾ ವಿಧಿ ಶಿಷ್ಯಸ್ಯಾಲೋಕನಂ ಸಮ್ಯಗಾಯತಾ ಪರಿಕೀರ್ತಿತಾ ॥ ಪ್ರಹ್ವೀಭೂಯತತಃ ಶಿಷ್ಯೋಲಿಂಗಂ ಸ್ವೀಕೃತ್ಯಭಕ್ತಿತಃ । ಗುರೋಸ್ಸ್ವಾಯತ್ತ ಮಿತ್ಯುಕ್ತ್ವಾ ಸೋತ್ತಮಾಂಗಾದಿಧಾರಣಮ್॥ ದೀಕ್ಷಾಪ್ರಕರಣದಲ್ಲಿ ವೀರಶೈವವೇದಾಂತಸಾರ ಮುಂತಾದ ಗ್ರಂಥಗಳಲಿ ಈ ಶ್ಲೋಕಗಳು ಉದಾಹೃತವಾಗಿವೆ. ಹಾಗು ಶ್ರೀಮನ್ನಿಜಗುಣನ ವಿವೇಕ ಚಿಂತಾಮಣಿಯಲ್ಲಿ ವೀರಶೈವ ಸಪ್ತವಿಧದೀಕ್ಷೆಗಳು ಈ ಕಾಮಿಕೋತ್ತರ ಶ್ಲೋಕಗಳಂತೆಯೆ ವರ್ಣಿಸಲ್ಪಟ್ಟಿವೆ. ಗುರುವು ಲಿಂಗವನ್ನು ತೆಗೆದುಕೊಂಡು ವಿಧಿಪೂರ್ವಕವಾಗಿ ಅರ್ಚಿಸಿ ಶಿಷ್ಯನನ್ನು ನಿರೀಕ್ಷಿಸುವುದು ಆಯತವು. ಹಾಗು ಶಿಷ್ಯನು ಗುರುವೇ ಲಿಂಗವು ಎನಗೆ ಸ್ವಾಯತ್ತವಾದಿತೆಂ

ಡು ವಿಜ್ಞಾಪಿಸಿ ಉತ್ತಮಾಂಗಾದಿಗಳಲ್ಲಿ ಧರಿಸುವುದು ಲಿಂಗಸ್ವಾಯತ್ತ
ಗ್ರಿಷ್ಟಿಯು ತಸ್ಮಾತ್ "ಅರ್ಶ ಆದಿಭ್ಯಃ ಅಚ್ ಎಂಬ ಸೂತ್ರದಿಂದ ಲಿ
ಗಾಯತ್ತಾದೀಕ್ಷಾ ಅಸ್ಯಾಸ್ಯ ಇತಿ ಲಿಂಗಾಯತಃ ಎದು ಸಿದ ವಾಗುತ್ತ
ಪ್ಪ, ಶಿವೈಕ್ಯನಿಗೆ ಶಿವಶರಣನೆಂಬ ಶಬ್ದಪ್ರಯೋಗದಂತೆ ಲಿಂಗಸ್ವಾಯತ್ತ
ನಿಗೆ ಲಿಂಗಾಯತ ಶಬ್ದವು ಸಹಜವಾದುದು.

ಬಾಗಾಯತ ಮುಂತಾದ ಶಬ್ದಗಳಂತೆ ಲಿಂಗಾಯತ ಶಬ್ದವು ಅ
ಸಂಸ್ಕೃತವಲ್ಲದಿಂದ ಸಂಸ್ಕೃತ ವ್ಯಾಕರಣೋಪಪತ್ತಿಯನ್ನು ಕೊಟ್ಟಿ
ರುವೆನು.

ಮೇಲೆ ೧೧ನೆಯ ಪುಟದಲ್ಲಿ ಈ ವೀರಶೈವ ಮತವು ಅನಾದಿ ವೃಷ
ಭೇಶನ ಸ್ವರೂಪವೆಂದೂ, ನಕಾರವಾಚ್ಯನಿವೃತ್ತಿಕಲಾಧಿಪನಾದ ನ
ದೀಶನೆಂಬಾ ವೃಷಭೇಶನೆ ಋಷಿಗಳ ಹೃದಯದಲ್ಲಿ ಆ ಧರ್ಮವನ್ನು
ಹೊಳಿಹಿದನೆಂತಲೂ, ಶೈಲಾದಿಯಾಗಿ ಅದನ್ನಾತನು ಆಚಾರ್ಯರೂಪದಿಂದ
ಬೋಧಿಸಿದನೆಂತಲೂ, ಬಸವನಾಗಿ ನಮಗೆ ನಡೆದು ತೋರಿಸಿದನೆಂತಲೂ
ಬರೆದಿರುವೆನು. ಇವುಗಳಿಗೆಲ್ಲ ಪ್ರಮಾಣಗಳನ್ನು ನೋಡುವ—ವೃಷ
ಭನೆ ಧರ್ಮಸ್ವರೂಪನೆಂಬುವಲ್ಲಿ ಸೂಕ್ಷ್ಮಾಗಮದಿಂದುದಾಹರಿಸಿದ
ವೃಷವಾಹನ ಲೀಲಾ ಶ್ಲೋಕವು ಪ್ರಮಾಣವಾಗಿದೆ. ಋಷಿಗಳ ಹೃ
ದಯದಲ್ಲಿ ಈ ಧರ್ಮಸ್ವರೂಪವನ್ನಾತನು ಪ್ರೇರಿಸಿದನೆನ್ನುವಲ್ಲಿ
"ತನ್ನೋ ನಂದೀ ಪ್ರಚೋದಯಾತ್" ನಂದೀಶನು ಆ ಶಿವಜ್ಞಾನ
ವನ್ನು ನಮಗೆ ಪ್ರೇರಿಸಲಿ ಎಂಬ ನಾರಾಯಣೋಪನಿಷದ್ವಾಕ್ಯವೂ, ಪ
ಚಾಕ್ಷರದ ಪ್ರಥಮಾಕ್ಷರವಾದ ನಕಾರಕ್ಕೆ ನಂದಿಯು ದೇವತೆಯೆಂದು
ಹೇಳುವ "ಗೌತಮೋಥ ಋಷಿಶ್ಛಂದೋ ಗಾಯತ್ರೀ ನಂದೀ ದೇವತಾ
ಆದ್ಯಃ ಸ್ವರಃ ಪೀತವರ್ಣಃ ಪೂರ್ವಾಸ್ಯಂ ಪ್ರಥಮಾಕ್ಷರೇ ॥ ಸೂ. ೪
೩೩. ಪ್ರಥಮಾಕ್ಷರವಾದ ನಕಾರಕ್ಕೆ ಪೂರ್ವಮುಖವೂ, ಪೀತವರ್ಣ
ವೂ, ಉದಾತ್ತ ಸ್ವರವೂ, ನಂದೀ ದೇವತೆಯೂ, ಗಾಯತ್ರೀಛಂದ
ಸ್ಸೂ, ಗೌತಮ ಋಷಿಯೂ ಸಂಬಂಧ ಪಟ್ಟಿರುವರು. ಇಂತೆಂಬ
ಶ್ಲೋಕವೂ ಪ್ರಮಾಣವಾಗಿವೆ. ಹೇಗೆಂದರೆ, " ಭೂಜಲಾಗ್ನಿ ಮರು

ಪೃಥ್ವ್ಯಮ್ನಾಂಬೀಜಾನ್ಯೇತಾನಿ ಶೋಭನೇ" ಸೂ—೪-೫೦-ಎಂಬುದರಿಂದ ನಕಾರವು ಪೃಥ್ವೀಬೀಜವು. ಪೃಥ್ವಿಯು ನಿವೃತ್ತಿಕಲಾಸ್ಥಾನವು ಭೂಮೌ ನಿವೃತ್ತಿರ್ನಿರ್ದಿಷ್ಟಾ ಪ್ರತಿಷ್ಠಾಪಯಸಿಸ್ಥಿತಾ॥ಯಜ್ಞವೈಭವಖಂಡ ಆ ೧೪—೨೬ ನಿವೃತ್ತಿ ಕಲೆಯಕಾರ್ಯವು, ಕರ್ಮಭೋಗ ನಿವೃತ್ತಿರೂಪ ಧರ್ಮಪ್ರವೃತ್ತಿಯು. " ಯಯಾಸೌ ಪಾರ್ಥಿವೇತತ್ವೇ ಕರ್ಮಭೋಗೋ ನಿವರ್ತ್ಯತೇ। ನಿವೃತ್ತಿಃ ಸಾಕಲಾಜ್ಞೇಯಾ॥ ವಿದ್ಯಾರಣ್ಯೋದಾಹೃತ ಆಗಮಿಕ ಶ್ಲೋಕಯಜ್ಞ ವೈಭವಖಂಡ೧೪ ಅಧ್ಯಾಯದ ೨೬ನೆಯ ಶ್ಲೋಕಟೀಕಾ. ಆದುದರಿಂದ ನಕಾರ ವಾಚ್ಯನಿವೃತ್ತಿ ಕಲಾಧಿ ದೇವತೆಯಾದನಂದೀಶನು ಮಂತ್ರ ದ್ರಷ್ಟಾರನಾದ ಋಷಿಯು ಕರ್ಮಭೋಗ ನಿವೃತ್ತಿಯನ್ನುಂಟುಮಾಡಿ ಧರ್ಮಪ್ರವೃತ್ತಿಯನ್ನುಂಟು ಮಾಡುವನು.

ಇನ್ನಾನಂದೀಶನೆ ಶೈಲಾದಿಯಾಗಿ ಆಚಾರ್ಯರೂಪದಿಂದ ನಂಮೀ ಲಿಂಗಧಾರಣ ವೀರಶೈವವನ್ನು ನೆಲೆಗೊಳಿಸಿದನೆಂಬುದಕ್ಕೆ "ಲಿಂಗಸ್ಯಮಹಿಮಾನಂತು ನಂದೀ ಜಾನಾತಿ ತತ್ವತಃ। ತಥಾಸ್ಕಂದೋಽಪಿ ಭಗವಾನನ್ಯೇತೇ ನಾಮಧಾರಕಾಃ। ಯಥೋಕ್ತಾಃ ಶಿವಧರ್ಮಾಹಿ ನಂದಿನಾ ಪರಿಕೀರ್ತಿತಾಃ। ಶೈಲಾದೇನ ಮಹಾಭಾಗಾ ವಿಚಿತ್ರಾ ಲಿಂಗಧಾರಕಾಃ॥ ಶವಸ್ಯೋಪರಿಲಿಂಗಂಚಧ್ರಿಯತೇ ಚ ಪುರಾತನೈಃ।ಲಿಂಗೇನ ಸಹ ಪಂಚತ್ವಂ ಲಿಂಗೇನ ಸಹ ಜೀವಿತಮ್। ಏತೇ ಧರ್ಮಾಃ ಸುಪ್ರತಿಷ್ಠಾಃ ಶೈಲಾದೇನ ಪ್ರಕೀರ್ತಿತಾಃ। ಧರ್ಮಃ ಪಾಶುಪತಃ ಶ್ರೇಷ್ಠಃ ಸ್ಕಂದೇನ ಪ್ರತಿಪಾಲಿತಃ। ಸ್ಕಂದಾತ್ಪ್ರತ್ಸಮವಾಪ್ತಮಗಸ್ತ್ಯೇನ ಮಹಾತ್ಮನಾ॥ ಸ್ಕಾಂದ ಮಾಹೇಶ್ವರಖಂಡಗತ ಕೇದಾರಖಂಡ ಅಧ್ಯಾಯ ೭. ಆದರೆ ಲಿಂಗದ ಮಹಿಮೆಯನ್ನು ಯಥಾರ್ಥವಾಗಿ ನಂದಿಯು ತಿಳಿದಿರುವನು. ಆದರಂತೆಯೆ ಪೂಜ್ಯನಾದ ಸ್ಕಂದನಾದರು ಅರಿತಿರುವನು. ಇನ್ನುಳಿದವರು ನಾಮಧಾರಿಗಳೆ. ಯಥೋಕ್ತವಾದ ಶಿವಧರ್ಮಗಳು ನಂದಿಯಿಂದ ಹೇಳಲ್ಪಟ್ಟುವು. ಲಿಂಗಧಾರಕರು ವಿಚಿತ್ರವಾದವರು; ಮಹಾಭಾಗರು. ಈ ಪುರಾತನರು ಶವದ ಮೇಲೆಯೂ ಲಿಂಗವನ್ನು ಧರಿಸುವರು. (ಮರಣಾನಂತರದಲ್ಲಿಯೂ ಲಿಂಗವನ್ನು ಶರೀರದಿಂದ ಗಲಿಸುವದಿಲ್ಲೆಂಬರ್ಥ). ಲಿಂ

ಗದೊಡನೆಯೆ ಅವರ ಬಾಳುವೆಯು. ಲಿಂಗದೊಡನೆಯೆ ಅವರ ಮೃತಿಯು. ಈ ಧರ್ಮಗಳು ಸುಪ್ರತಿಷ್ಠವಾಗಿ ಶೈಲಾದನಿಂದ ಹೇಳಲ್ಪಟ್ಟುವು. ಷಣ್ಮುಖನದನ್ನು ಪಾಲಿಸಿದನು. ಷಣ್ಮುಖನಿಂದ ಅಗಸ್ತ್ಯನರಿತನು ಎಂಬುದು ಪ್ರಮಾಣವಾಗಿದೆ.

ನಂದಿಯು ಬಸವನೆನ್ನುವಲ್ಲಿ ವೀರಶೈವ ಗುರೂತ್ತಮರ ಉಕ್ತಿಗಳನ್ನುದಾಹರಿಸಿರುವೆನು. ಇನ್ನೂ ಹಲವು ಉಕ್ತಿಗಳನ್ನುದಾಹರಿಸುವೆನು. ಬಸವನ ವಚನಗಳಲ್ಲಿ ವೀರಶೈವ ಸಿದ್ಧಾಂತಸಾರವು ತುದುಗಿರುವುದನ್ನು ತೋರಿಸಿರುವೆನು. ಮುಂದೆ ಆರು ಅಂಗಸ್ಥಳಗಳೂ, ಆರು ಲಿಂಗಸ್ಥಳಗಳೂ ಬಸವ ವಚನಗಳಲ್ಲಿ ಸರಸವಾಗಿ ಪ್ರತಿಪಾದಿತವಾಗಿರುವುದನ್ನು ತೋರಿಸುವೆನು. ಆದುದರಿಂದ ಈ ಧರ್ಮಕ್ಕೆ ಬಸವನೆ ಮೂಲಪುರುಷನು. ಶ್ರೀಪಂಚಾಚಾರ್ಯರು ವೀರಶೈವ ಅಥವಾ ಲಿಂಗಾಯತ ಧರ್ಮಕ್ಕೆ ಗುರುಗಳಾಗಿ ಅನೇಕರನ್ನುದ್ಧರಿಸಿದರಿಂದಲೂ, ಗುರುಸ್ವರೂಪರಾಗಿ [illegible]ಗದಲ್ಲಿ ನಂಮ ಧರ್ಮಸಿದ್ಧಾಂತವನ್ನು ನೆಲೆಗೊಳಿಸಿದರಿಂದಲೂ, ಸ್ಥಾಪಕರಹುದು. ಆದರೆ ಕಾಶೀನಾಥನೂ ಆತನ ಅನುಯಾಯಿಗಳೂ ಸಾಧಿಸಲು ಹವಣಿಸುವಂತೆ ಈ ಮತಕ್ಕೆ ಆದ್ಯಪ್ರವರ್ತಕರಾಗುವದಿಲ್ಲ. ಈ ಅರ್ಥದಿಂದ ಸ್ಥಾಪಕರಲ್ಲ.

ಬಸವೇಶನು ಈ ಧರ್ಮಕ್ಕೆ ಮೂಲಪುರುಷನೆನ್ನುವುದರಿಂದ ಇದಕ್ಕೆ ಅರ್ವಾಚೀನತ್ವವು ಬರುವುದಿಲ್ಲ. ಪಂಚಾಚಾರ್ಯರು ಮೂಲಪುರುಷರೆಂದು ಹೇಳುವುದರಿಂದ ಆ ಅರ್ವಾಚೀನತ್ವವು ತಪ್ಪುವುದಿಲ್ಲ. ಶ್ರೀರೇವಣಾದಿಗಳು ಕಲಿಯುಗೀನರಾಗಿದ್ದುದರಿಂದ ಈ ಮತದ ಪ್ರಾಚೀನತ್ವಕ್ಕಾಗಿ ಏಕಾಕ್ಷರಾದಿ ನಾಮಗಳಿಂದ ಅವರ ಆಚಾರ್ಯತ್ವವನ್ನು ಯುಗಾಂತರಗಳಲ್ಲಿ ಕಲ್ಪಿಸುವರು. ಯುಗಾಂತರಗಳಲ್ಲಿ ಏಕಾಕ್ಷರಾದಿಗಳ ಪ್ರಸಿದ್ಧಿಯು ಪ್ರಾಮಾಣಿಕ ಗ್ರಂಥಗಳಲ್ಲಿ ದೊರೆಯುವುದಿಲ್ಲ. ಶೀಲವಾದಿಗಳು ಅನ್ಯ ವೀರಶೈವರನ್ನು ಹಿಂದಿಗೊತ್ತಲಿಕ್ಕೆ ಬರೆದ ಸುಪ್ರಭೇದವು ಪ್ರಭಗ್ನವಾಗಿದೆ.

ಇಂತಹ ಶ್ರೀಬಸವೇಶನು ಪುಣ್ಯಸ್ವರೂಪನು. ಸಕಲ ಜಗವನುದ್ಧರಿಸಿದವನು. ಆದುದರಿಂದ ಬ್ರಾಹ್ಮಣಾದಿ ಚಂಡಾಲಾಂತದವರೆಲ್ಲರು

ಆತನನ್ನು ಸ್ತುತಿಸುವರು. ಹಾಗೆ ಭಕ್ತಿಯಿಂದ ಕೆಲವರು ಬಾಲಬಸವನೆಂಬ ನಾಮವನ್ನಿಟ್ಟುಕೊಂಡಿರುವರು. ನಿಂದಕರಾದ ಕಾಶೀನಾಥನಿಗಿಂತಲು ಅವನಿಗೆ ಉತ್ತೇಜನ ಕೊಡುವ ಚಂಡಾಲರಿಗಿಂತಲು ಈ ಬಾಲಬಸವರು ಹೆಚ್ಚಿನವರು.

ಇಂತು ಸಕಲರಿಗೂ ವಂದ್ಯನಾದ ಬಸವನನ್ನು ಕುರಿತು ಆರಾಧ್ಯನೋ ಸ್ಮಾರ್ತನೋ ಎಂದು ವಾದಿಗಳು ಕೇಳುವುದುಂಟು. ಬಸವನು ಸ್ಮಾರ್ತನಲ್ಲ, ಆರಾಧ್ಯನಲ್ಲ; ಅನಾದಿ ವೀರಶೈವನು-ಲಿಂಗವಂತನು-ಸದ್ಗುರುಜಾತನು. ಅನಾದಿ ವೃಷಭೇಶ್ವರನು ತನ್ನ ಗರ್ಭದಲ್ಲಿ ಉದಯವಾಗಬೇಕೆಂದು ಮಾದಲಾಂಬಿಕೆಯು ನಂದೀಶ್ವರನ ವ್ರತವನ್ನು ಮಾಡಿರುವದು ಸಹಜವು. ಆರಾಧ್ಯ ಬ್ರಾಹ್ಮಣರಿಗೆ ಇದು ವಿರೋಧವಾದುದಲ್ಲ. ಲಿಂಗಾಯತರು ಅಂದರೆ ಇಷ್ಟಪ್ರಾಣಭಾವಲಿಂಗವನ್ನು ಏಕೀಕರಿಸಿ ಪೂಜಿಸುವ ವೀರಶೈವರು. ಪೂಜಿಸಬಾರದಾದ ಸ್ಥಾವರಲಿಂಗಗಳಲ್ಲಿ ಪಂಚಾಚಾರ್ಯರು ವೀರಶೈವ ಮತ ಪ್ರಸಾರಕ್ಕಾಗಿ ಹುಟ್ಟಿದರೆಂದು ಸಾಧಿಸುವ ಕಾಶೀನಾಥೀಯರು ಈ ಪ್ರಶ್ನವನ್ನು ಕೇಳಲಿಕ್ಕೆ ಹೇಗೆ ನಾಚಲಿಲ್ಲವೊ ತಿಳಿಯದು. ಆದರೆ "ಲಜ್ಜಾಮೇಕಾಂ ಪರಿತ್ಯಜ್ಯ ಸರ್ವತ್ರ ವಿಜಯೀ ಭವ" ಎಂಬ ನೀತಿಯನ್ನನುಸರಿಸುವ ಈ ಜನರಿಗಿದು ಸಹಜವೆ.

ಬಸವನು ಮತಭ್ರಷ್ಟನೆಂದು ಸಾಧಿಸಲಿಕ್ಕಾಗಿ ಹಂಮಿಗಿಯ ಈ ಬಸದ ಶಾಂತಪ್ಪನು ಆರಾಧ್ಯ ಬ್ರಾಹ್ಮಣರೇ ವೀರಶೈವರೆಂದು ಹೇಳುತ್ತಾನೆ. ಶ್ರೀಪರಮೇಶ್ವರದಲ್ಲನುರಕ್ತಿ ಶೈವದಲ್ಲಿ ವೀರತ್ವದಿಂದ ವೀರಶೈವನೆಂಬರ್ಥದಿಂದ. ಆರಾಧ್ಯನು ವೀರಶೈವನಿರಬಹುದು. ಆದರೆ ಪಂಚಾಚಾರಪರನಾದ ವೀರಶೈವನು ಲಿಂಗಾಯತನಲ್ಲದೆ ಬೇರೆಯಾವನಿರನು. ಈ ವಿಶಾಲಮತಿಯು ಆರಾಧ್ಯ ಬ್ರಾಹ್ಮಣರು ನಿಜವಾದ ವೀರಶೈವರು, ಉಳಿದವರು ಶ್ರೀಬಸವನಿಂದ ಮತವು ಕಟ್ಟ ಬಳಿಕ ಆದ ಲಿಂಗಾಯತರು ಎಂದು ಸಾಧಿಸುತ್ತಾನೆ. ಕಾಶೀನಾಥನಿಗೆ ಜನಿವಾರವಿರುವುದೊ? ಎಂದು ಉಪನಯನವಾಗಿತ್ತೊ? ಕಾಶೀನಾಥನ ಪೋಷಕ

ನಾಡ ಸಿದ್ಧಲಿಂಗಯ್ಯನವರು ಜನಿವಾರವನ್ನು ಹಾಕಿರುವರೊ ? ಅಥವಾ ಹಿಂದಕ್ಕೆಂದಾದರು ಹಾಕಿದ್ದರೊ? ಕಾಶೀನಾಥನ ಪೋಷಕರಲ್ಲಿ ಒಬ್ಬರು ಮಾತ್ರ ಮೊದಲು ಜನಿವಾರ ಹಾಕಿದ್ದರು. ಆಗ ಅವರಿಗೆ ಲಿಂಗವಿಲ್ಲವೆಂದು ಕೇಳಿಕೆಯುಂಟು. ಉಜ್ಜನಿಮಠದ ಸಿದ್ಧಲಿಂಗಯ್ಯನವರು ಜನಿವಾರವನ್ನು ಹಾಕಿಕೊಳ್ಳಿರೆಂದು ತಮ್ಮ ಅಂಧಶ್ರದ್ಧಾಯುತ ಶಿಷ್ಯರಿಗೆ ಹೇಳಿರುವರೊ ? ಇದೇನು ಪರರಿಗೆ ಅಪಶಕುನ ಮಾಡುವುದಕ್ಕಾಗಿ ತಮ್ಮ ಮೂಗು ಹರಿದುಕೊಳ್ಳುವದೇತರ ಜಾಣತನ ?

ಇರಲಿ, ಆರಾಧ್ಯರು ಲಿಂಗಾಯತ ವೀರಶೈವರಾಗಲಿ ಆಗದಿರಲಿ ಬಸವನು ಲಿಂಗಾಯತನು ಆರಾಧ್ಯನಲ್ಲ. ಪ್ರಾಕೃತ ಜಾತಿಯುತನಾದರು ಲಿಂಗಧಾರಣದಿಂದ ತನ್ನ ತಂದೆತಾಯಿಗಳ ಜಾತಿಯನ್ನು ನೀಗಿ ಗುರುಕರಜಾತನಾಗುವನೆಂದು ಶ್ರೀಸೂಕ್ಷ್ಮಾಗಮವು " ಯಸ್ಯೈವಂ ಶಾಂಭವೀ ದೀಕ್ಷಾ ಸಂಜಾತಾ ಗುರುಕೃಪಾವಶಾತ್ ಪೂರ್ವ ಜಾತ್ಯಾದಿಕಂತಸ್ಯನಸ್ಮರೇತ್ ಪ್ರಾಕೃತಂಹಿತತ್ ಆವಾತನಿಗೆ ಈ ವಿಧದಿಂದ ಶಾಂಭವ ದೀಕ್ಷೆಯಾಗಿದೆಯೊ ಆತನ ಪೂರ್ವಜಾತಿ ಮೊದಲಾದುದನ್ನು ಕೇಳಬಾರದು, ಅದು ಪ್ರಾಕೃತವು. ಎಂದೂ " ಅಪ್ರಾಕೃತಸ್ಯ ಭಕ್ತಸ್ಯ ಗುರುಹಸ್ತಾಮಲಾಂಬುಜಾತ್ । ಪುನರ್ಜಾತಸ್ಯಾತ್ಮ ಜನ್ಮಜಾತ್ಯಾದಿ ನಚಕಲ್ಪಯೇತ್ ॥ ಗುರುವಿನ ನಿರ್ಮಲವಾದ ಕರಕಮಲದಲ್ಲಿ ಹುಟ್ಟಿದುದರಿಂದ ಅಪ್ರಾಕೃತನಾಗಿ ಪುನರ್ಜಾತನಾದ ಭಕ್ತನ ಜಾತ್ಯಾದಿಗಳನ್ನು ಕಲ್ಪಿಸಕೂಡದು ಎಂದೂ ಹೇಳುತ್ತಿರಲು ಅನಾದಿ ವೃಷಭೇಶ್ವರನಿಗೆ ಅವತಾರ ಕಾರಣದಿಂದ ತಂದೆತಾಯಿಗಳಾದ ಮಾದರಸ ಮಾದಲಾಂಬೆಯರ ಜಾತಿಯು ಅನ್ವಯಿಸಲಾರದು. ಎಣ್ಣೆಬತ್ತಿಗಳಿಗೆ ಅಗ್ನಿಯು ತಗಲಿ ಉಂಟಾದ ದೀಪವು ತನ್ನ ಕಾರಣಗಳಾದ ಎಣ್ಣೆಬತ್ತಿಗಳಿಗೂ ವಿಲಕ್ಷಣವಾಗಿರುವಂತೆ ಗುರುಕರ ಕಂಜಾತ ಜಾತವಾದ ಭಕ್ತನು ತನ್ನ ತಾಯಿತಂದೆಗಳಿಗೆ ವಿಲಕ್ಷಣನಾಗುವದು.

ಶ್ರೀಬಸವೇಶನು ಅನಾದಿನಂದೀಶನೆ ಎಂದುದರಿಂದ ಲಿಂಗಸನ್ನಿಹಿತನು. ಆದರೆ ಈ ಲೋಕಖ್ಯಾತನು ನಂಮಂಥ ಸಂಸಾರ ಮಗ್ನರು ನ...

ಯತಕ್ಕೆ ಮಾರ್ಗವನ್ನು ಪ್ರಕಟಿಸಲಿಕ್ಕಾಗಿ ಅವತರಿಸಿದರಿಂದ ಜನನವಾದ ಕೂಡಲೆ ಲಿಂಗಧಾರಣವಾಗಬೇಕೆಂಬ ನಿಯಮವನ್ನು ನಂಮಲ್ಲಿ ಬಿಂಬಿಸಲಿಕ್ಕಾಗಿ ಲಿಂಗವನ್ನು ಮರೆಮಾಡಿ ಧಾರಣಂಗೆಯ್ಸಿಕೊಂಡಂತೆ, ನಟಿಸಿದನು. ಪರಮಾತ್ಮನು ಅರ್ಜುನಾನುಗ್ರಹಕ್ಕಾಗಿ ಕಿರಾತವೇಷವನ್ನು ಧರಿಸಿದಾಗ ಹಾಗು ದಾರುಕದಲ್ಲಿ ಋಷಿಪತ್ನಿಯರ ಪರೀಕ್ಷಿಸುವಾಗ ತನ್ನ ಚಂದ್ರಕಲಾದಿ ಲಕ್ಷಣವನ್ನು ಮರೆಮಾಡಿಕೊಂಡಂತೆ ತನ್ನ ಲಿಂಗವನ್ನು ನಂದೀಶನು ಮರೆಮಾಡಿಕೊಂಡುದು ಸೋಜಿಗವಲ್ಲ, ಆಲಿಂಗದ ಪ್ರಕಟವನ್ನ ಲಿಂಗಧಾರಣನೆವದಿಂದ ಮಾಡಿದನು.

ಬಸವೇಶನಿಗೆ ಲಿಂಗಧಾರಣಂಗೈದ ಸಂಗಮೇಶನು ಪರಮೇಶನೆ. ಪರಮೇಶನಲ್ಲದ ಆವಗುರುವು ಬಸವಣ್ಣಂಗೆ ಲಿಂಗಧರಿಸಲು ಶಕ್ತನಾಗುವನು? ಸಂಗಮೇಶನು ಶಾಸ್ತ್ರೋಕ್ತವಾಗಿಯೆ ಲಿಂಗಧಾರಣಂಗೆಯ್ದನು. ಲಿಂಗಧಾರಣವೆ ಮುಖ್ಯವಾದುದರಿಂದ ಪುರಾಣಕರ್ತರು ಅದನ್ನಷ್ಟೆ ಬರೆದರು. ವಿವಾಹವಾದಿತೆಂದು ಹೇಳುವಾಗ ಅವಾಂತರ ಸಂಗತಿಗಳನ್ನು ಎಲ್ಲ ಹೇಳಬೇಕೆಂಬ ನಿಯಮವಿಲ್ಲ ಅದರಂತೆ ಇಲ್ಲಿಯಾದರು ಅದೆ.

ದೀಕ್ಷೆಯು ಸಾಧಿಕರಣ ದೀಕ್ಷೆಯೆಂತಲೂ ನಿರಧಿಕರಣ ದೀಕ್ಷೆಯೆಂತಲೂ ದ್ವಿವಿಧವು. ಸಾಧಿಕರಣವೆಂದರೆ ಶಿವನು ಆಚಾರ್ಯಮೂರ್ತಿಯನ್ನು ಅಧಿಷ್ಠಿಸಿಮಾಡುವ ದೀಕ್ಷೆಯು. ನಿರಧಿಕರಣವೆಂದರೆ ಆಚಾರ್ಯ ಮೂರ್ತಿಯನ್ನು ಅಧಿಷ್ಠಿಸದೆ ತಾನೆಯೆ ಮಾಡಿದದೀಕ್ಷೆಯು; ಸೇಯಂ ದೀಕ್ಷಾದ್ವಿಧಾ ಭಿನ್ನಾ ಸಾಧಾರಾಧಾರವರ್ಜಿತಾ! ಆಚಾರ್ಯಮಂತರೇಣೈವಕ್ರಿಯತೇ ಶಂಕರೇಣಯಾ । ವಿಜ್ಞಾನಾಕಲನಾಮ್ನಶ್ಚ ಪ್ರಳಯಾಕಲಕಸ್ಯ । ತೀವ್ರ ಶಕ್ತಿ ನಿಪಾತೇನ ದೀಕ್ಷಾ ಸಾಧಾರವರ್ಜಿತಾ ॥ ಗುರುಮೂರ್ತಿಂ ಸಮಾಶ್ರಿತ್ಯ । ಮಂದಶಕ್ತಿ ನಿಪಾತನಾತ್ । ಕುರುತೇ ಸಕಲಸ್ಯೇಶಃ ಸಾಧಾರಾಂತಾಮಿಮಾಂ ವಿದುಃ ॥ ಎಂಬುದು ಈ ವಿಷಯದಲ್ಲಿ ಪ್ರಮಾಣವಾಗಿದೆ. ಶ್ರೀಪರಶಿವನು ಗುರು ಮೂರ್ತಿಯಾದ ಸಂಗಮೇಶನನ್ನು ಅಧಿಷ್ಠಿಸಿ ಬಸವನಿಗೆ ಈ ದೀಕ್ಷೆಯನ್ನು ಮಾಡಿದನು. ನಿತ್ಯಲಿಂಗಸಂಬಂಧಿಯಾದ ಬಸವಣ್ಣನಿಗೆ ಜನನಕಾಲದಲ್ಲಾದ ದೀಕ್ಷೆಯು ಭಕ್ತ ಜನರಿಗೆ ಮಾರ್ಗದರ್ಶಕ ಪ್ರಯೋಜನವುಳ್ಳುದಲ್ಲದೆ ಬಸವನಿಗೆ

ಲಿಂಗಸಂಗವಾಗಲೆಂದು ಮಾಡಿದುದಲ್ಲ ಏಕೆಂದರೆ ಆ ಲಿಂಗವು ಆತನಲ್ಲಿ ನಿತ್ಯ ಸಮವೇತವಾದುದು.

ಸಂಗಮೇಶನೆಂಬ ಮೂರ್ತಿಯ ಅಧಿಷ್ಠಾನವಾದರು ಸಾಧಾರ ದೀಕ್ಷೆಯ ಪ್ರತಿಪಾಲನಕ್ಕಾಗಿತ್ತು. ಸಂಗಮೇಶ್ವರನು ಪಂಚಾಚಾರ್ಯರೆಲ್ಲಾರವಂಶದವನೆಂದು ವಾದಿಗಳು ಹೇಳುವರು. ಗುರುವಂಶವೆಂಬುದು ರಕ್ತ ಸಂಬಂಧದಿಂದ ಎಂದು ಸಿದ್ಧವಾಗಲಾರದು. ವಿದ್ಯಾಸಂಪ್ರದಾಯ ಪರಂಪರೆಯಿಂದಲ್ಲದೆ ರಕ್ತಸಂಬಂಧದಿಂದ ಗುರುವಂಶವನ್ನು ಸಿದ್ಧ ಮಾಡಲಿಕ್ಕೆ ಬರಲಾರದು. ರಕ್ತಸಂಬಂಧದಿಂದ ಗುರುವಂಶವನ್ನು ಹೇಳುವವರು, ರೇಣುಕಾದ್ಯಾಚಾರ್ಯರೇ ಮೂಲ ಆಗಮ ಪ್ರವರ್ತಕರೆಂತಲು ಅವರಿಗೆ ಪ್ರತಿಯೊಬ್ಬರಿಗೆ ಹೆಂಡರಿದ್ದರೆಂತಲು ಅವರಿಂದ ಸಂತತಿಯಾಯಿತೆಂದಲೂ ಆ ಸಂತತಿಯವರೇ ಗುರುಗಳೆಂತಲೂ ಸಿದ್ಧಪಡಿಸಬೇಕು. ಮೂಲ ಆಗಮ ಪ್ರವರ್ತಕರಲ್ಲಿಯಾಗಲಿ ವೇದದ್ರಷ್ಟೃಗಳಾದ ಋಷಿಗಳಲ್ಲಾಗಲಿ, ಪಂಚಾಚಾರ್ಯರ ಹೆಸರುಗಳು ಬಂದಿಲ್ಲ. ವಾದಿಗಳು ಅವಲಂಬಿಸುವ ಸುಪ್ರಭೇದಾಂತರ್ಗತವೆನ್ನುವ ಪಂಚಾಚಾರ್ಯಪ್ರಕರಣದ ಹಾಗೆ ಅದೇ ಮಾಲಿಕೆಯಲ್ಲಿಯ ಪಾಶುಪತಾಗಮದ ಮತ್ತು ವೀರಲೈಂಗೋತ್ಪತ್ತಿನ ಸಮಾಚಾರವನ್ನು ಸುಪ್ರಭೇದ ಪ್ರಭಂಜನದಲ್ಲಿ ತೆಗೆದುಕೊಂಡಿರುವೆನು. ಹಾಗಾದರು ವಾದಕ್ಕಾಗಿ ಈ ಗುರುವಂಶವು ಉಂಟೆಂದು ಹಿಡಿಯೋಣ. ಅಷ್ಟರಿಂದಲೆ ಆ ವಂಶದವನೇ ಲಿಂಗಧಾರಣ ಮಾಡಬೇಕೆಂದು ಸಿದ್ಧವಾಗದು. ಗುರುಮೂರ್ತಿಯನ್ನು ಧರಿಸಿ ಪರಶಿವನು ತಾನೇ ಇರಲು ಮತ್ತೊಬ್ಬ ಆಚಾರ್ಯನ ಅಪೇಕ್ಷೆ ಏಕೆ? ಗುರುವಂಶೀಯನಾದ ಆಚಾರ್ಯನು ಮಾಡುವ ದೀಕ್ಷೆಯು ಸ್ವಕರ್ತೃಕವಲ್ಲ ಅದು ಶಿವಕರ್ತೃಕವೆ. ಅಗ್ನಿಯು ಕಾಷ್ಠವನ್ನು ಅಧಿಷ್ಠಿಸಿದಹನಂಗೆಯ್ಯುವುದು ಅಗ್ನಿಕಾರ್ಯವಲ್ಲದೆ ಕಾಷ್ಠಕಾರ್ಯವಲ್ಲ. ರೇಣುಕಾದಿಗಳನ್ನು ಪರಮಾತ್ಮನು ಹುಟ್ಟಿಸಿದನೊ ತಾನೆಯ ರೇಣುಕಾದಿರೂಪವನ್ನು ಹೊಂದಿದನೆ? ತಾನೆಯ ರೇಣುಕಾದಿರೂಪವನ್ನು ಧರಿಸಿದನೆಂದರೆ. ಸಂಗಮೇಶ್ವರ ರೂಪವನ್ನು ಧರಿಸಿ ಬಸವನ ಲಿಂಗಧಾರಣಮಾಡಲಿಕ್ಕೆ ಪರಮೇಶನಿಗೆ ಆವ ಆತ

ವಿದ್ದಿತು? ಶ್ರೀರೇಣುಕಾದಿಗಳನ್ನು ಹುಟ್ಟಿಸಿ ಅವರ ಮೂರ್ತಿಯನ್ನ ಧಿಷ್ಠಿಸಿ ದೀಕ್ಷೆಗೆಯ್ದನೆಂದರೆ ತಾನೆಯೆ ಗುರು ಮೂರ್ತಿಯಾಗಿ ಅದನ್ನಧಿ ಷ್ಠಿಸಿ ದೀಕ್ಷಿಸಿದುದು ಪ್ರಶಸ್ತತರವಲ್ಲವೆ? ಸರ್ವಸ್ವತಂತ್ರನಾದ ಪರ ಮೇಶನು ನಂದಿಕೇಶನ ಅವತಾರನಾದ ಬಸವದೀಕ್ಷೆಯನ್ನು ವಾದಿಗ ಳ ಪಾಶು ಪತಾಗಮದಂತೆ ಅಸ್ವತಂತ್ರರಾದ ರೇಣುಕಾದಿಗಳಿಂದ ಮಾಡಿ ಸದೆ ತಾನೆಯೆ ಗುರುಮೂರ್ತಿಯ ರೂಪವಧರಿಸಿ ಅದನ್ನಧಿಷ್ಠಿಸಿಮಾಡಿದ ದೀಕ್ಷೆಯಿಂದ ಬಸವನ ಪ್ರಭಾವವೆ ಹೆಗ್ಗಳವೆನಿಸುತ್ತದಲ್ಲವೆ, ಅಮಹಾ ಮಹಿಮನಿಗೆ ಅವಕೊರತೆಯೂ ಇರಲಾರದು. ರೇತೋಜನ್ಯ ಮೂರ್ತಿ ಯನ್ನಧಿಷ್ಠಿಸಿಯೆ ದೀಕ್ಷೆಯಾಗಬಹುದಲ್ಲ ದಿಲ್ಲವೆಂದರೆ ರೇತೋಜನ್ಯರ ಲ್ಲದ ರೇಣುಕಾದಿಗಳ ಮೂರ್ತಿಯನ್ನಧಿಷ್ಠಿಸಿ ಹೇಗೆ ದೀಕ್ಷೆಗೆಯ್ದನು?

ಲಿಂಗಧಾರಣವು ಸ್ಥೂಲ ಶರೀರಕ್ಕಾಹಿ. ಗರ್ಭದಲ್ಲಿ ಶಿಶುವಿರು ವಾಗ ಲಿಂಗಧಾರಣ ಮಾಡಲಿಕ್ಕೆ ಬರಲಾರದು. ಆದುದರಿಂದ ಬಸವನಿಗೆ ಜನನಾನಂತರದಲ್ಲಿ ಲಿಂಗಧಾರಣವಾದುದು ವಿಹಿತವು. ಲಿಂಗಧಾರಣ ಪರವಾದ "ನಿಧನಪತಯೇನಮಃ ನಿಧನಪತಾಂತಿಕಾಯನಮಃ" ಎಂಬ ಮೊ ದಲಾದ ಮಂತ್ರಜಾತವು "ತತ್ಸೋಮಸ್ಯಸೂರ್ಯಸ್ಯಸರ್ವಲಿಂಗಂಸ್ಥಾ ಪಯತಿ ಪಾಣಿಮಂತ್ರಂ ಪವಿತ್ರಂ" ಎಂದಿಂತಾಗಿ ಮುಗಿಯುತ್ತದೆ. "ಪಾ ಣಿಮಂತ್ರಂ" ಎಂಬುದರರ್ಥವು "ಪಾಣೌಲಿಂಗಂ ವಿನಿಕ್ಷಿಪ್ಯ ದೀಕ್ಷಾಕಾ ಲೇ ಗುರುಃಶಿವಂ । ಯೇನ ಸ್ತೌತಿ ತನ್ಮಂತ್ರಂ ಪಾಣಿಮಂತ್ರಂ ವದಂ ತಿಹಿ ॥" ಗುರುವು ದೀಕ್ಷಾಕಾಲದಲ್ಲಿ ಶಿಷ್ಯನ ಹಸ್ತದಲ್ಲಿ ಲಿಂಗವನ್ನಿ ಟ್ಟು ಆವಮಂತ್ರದಿಂದ ಸ್ತುತಿಸುವನೊ ಅದು (ಆ ಮಂತ್ರದಿಂದ ಸ್ತುತಿ ಸಲ್ಪಟ್ಟ ಲಿಂಗವು) ಪಾಣಿಮಂತ್ರವು ಎಂದು ಹೇಳಲ್ಪಟ್ಟಿದೆ. "ಪ್ರ ಹ್ವೀಭೂಯತತಃ ಶಿಷ್ಯೋ ಲಿಂಗಂ ಸ್ವೀಕೃತ್ಯಭಕ್ತಿತಃ ಗುರೋಃಸ್ವಾಯ ತ್ತಮಿತ್ಯುಕ್ತ್ವಾ ಸ್ವೋತ್ತಮಾಂಗಾದಿಧಾರಣಂ ॥" ಎಂಬ ಕಾಮಿಕ ವಚ ನವು ಶಿಷ್ಯನು ಗುರುವಿಗೆ ಬಾಗಿದವನಾಗಿ ಲಿಂಗವನ್ನು ಭಕ್ತಿಯಿಂದ ಸ್ವೀಕರಿಸಿ, ಗುರುವೆ ಲಿಂಗವು ಎನ್ನಲ್ಲಿ ಸ್ವಾಯತ್ತವಾದಿತು ಎಂದು ಹೇ ಳಿ ಉತ್ತಮಾಂಗಾದಿಯಲ್ಲಿ ಧರಿಸುವುದೆ ಲಿಂಗಸ್ವಾಯತ ದೀಕ್ಷೆಯೆಂದು

ನಿಧಿಸುತ್ತದೆ. ಅದರಂತೆಯೆ "ಪವಿತ್ರಂ ತೇ ವಿತತಂ ಬ್ರಹ್ಮಣಸ್ಪತೇ ಪ್ರಭುರ್ಗಾತ್ರಾಣಿ ಪರ್ಯೇಷಿ ವಿಶ್ವತಃ ॥" ಎಂಬ ಋಕ್ಕಿಗೆ ವಿವರಣರೂಪವಾದ ಬ್ರಹ್ಮೇತಿ ಲಿಂಗಮಾಖ್ಯಾತಂ ಬ್ರಹ್ಮಣಸ್ಪತಿರೀಶ್ವರಃ । ಪವಿತ್ರಂತದ್ಧಿವಿಖ್ಯಾತಂ ತತ್ಸಂಪರ್ಕಾತ್ತನುಃಶುಚಿಃ ॥ ಬ್ರಹ್ಮವೆಂದರೆ ಲಿಂಗವು ಬ್ರಹ್ಮಣಸ್ಪತಿಯು. ಈಶ್ವರನು ಆ ಲಿಂಗ ಸಂಪರ್ಕದಿಂದ ಶರೀರವು ಶುಚಿಯಾದಿತು ಎಂಬೀ ಪ್ರಮಾಣದಿಂದ ಲಿಂಗವು ಶಿಷ್ಯನ ಶರೀರಕ್ಕೆ ಸಂಬಂಧ ಪಡಬೇಕಾದುದರಿಂದ ಜನನಾನಂತರದಲ್ಲಿಯೆ ಲಿಂಗಧಾರಣ ಗೆಯ್ಯುವುದು ಶಾಸ್ತ್ರಾಭಿಪ್ರಾಯವು. ಗರ್ಭದ ಎಂಟನೆಯ ತಿಂಗಳಲ್ಲಿ ಲಿಂಗಧಾರಣಂಗೆಯ್ಯಬೇಕೆಂಬ ವಚನವು ಜನನಾನಂತರದಲ್ಲಿ ಅವಿಲಂಬವಾಗಿಯೆ ಲಿಂಗಧಾರಣವಾಗಲೆಂಬ ಅಭಿಪ್ರಾಯವನ್ನು ಕೊಡುತ್ತದೆ. ಲೋಕದಲ್ಲಿಯಾದರು ಇಂತಹ ಪ್ರಯೋಗಗಳುಂಟು. "ತವಪ್ರಸಾದಸ್ಯ ಪುರಸ್ತು ಸಂಪದಃ" ಸಂಪತ್ತುಗಳು ನಿನ್ನ ಅನುಗ್ರಹಕ್ಕಿಂತಲು ಮೊದಲೆ ತೋರುವುವು ಎಂಬ ವಾಕ್ಯಪ್ರಯೋಗದಲ್ಲಿ ನಿನ್ನ ಅನುಗ್ರಹದಿಂದ ಅವಿಲಂಬಿತವಾಗಿ ಸಂಪತ್ತುಗಳು ಒದಗುತ್ತವೆಂಬ ಅಭಿಪ್ರಾಯವಿರುತ್ತದೆ. ಅದರಂತೆ ಇಲ್ಲಿಯಾದರು ಅವಿಲಂಬವೆ ತಾತ್ಪರ್ಯವು.

ಹೀಗೆ ತಾತ್ಪರ್ಯವುಂಟೆಂಬುವಲ್ಲಿ ಮೀಮಾಂಸಾಶಾಸ್ತ್ರನಿರ್ಣಯವಾದರು ಉಂಟು. ದೀಕ್ಷಾವಿಧಾನದಲ್ಲಿ ತನುಶುದ್ಧಿಯು ಮುಖ್ಯವಾದುದು. ಆ ತನುಶುದ್ಧಿಗೆ ಶರೀರಲಿಂಗಸಂಪರ್ಕವು ಆವಶ್ಯಕವಾದುದು. ಜನನವಾಗುವ ಶಿಶುವಿಗೆ ಲಿಂಗದೀಕ್ಷೆಯಾಗಬೇಕು. ಆ ದೀಕ್ಷೆಯು ಜನನಕ್ಕಿಂತಲು ಪೂರ್ವದಲ್ಲಿ ಗರ್ಭಸ್ಥವಿರುವಾಗಲಾಗಬೇಕೋ ಅಥವಾ ಜನನ ಕ್ಷಣದಲ್ಲಿ ಅವಿಲಂಬಿತವಾಗಿ ಆಗತಕ್ಕುದೋ ಎಂಬುವುದು ವಿಚಾರಣೀಯವಾಗಿದೆ. ದೀಕ್ಷೆಯು ಮುಖ್ಯವು, ಅದರ ಕಾಲವು ದೀಕ್ಷಾಂಗವು ಅಂದರೆ ದೀಕ್ಷೆಗೆ ಅಪ್ರಧಾನವಾದುದು. ದೀಕ್ಷಾಪದಕ್ಕೆ ಅರ್ಥವಾದ ಲಿಂಗಾಂಗಗಳ ಸಂಯೋಗಕ್ಕೆ ಮತ್ತು ಗರ್ಭಸ್ಥಶಿಶುವಿಗೆ ಲಿಂಗಧಾರಣವೆಂದು ಹೇಳಿದ ಕಾಲಕ್ಕೆ ವಿರೋಧವು ಬಂದರೆ ತನುವಿಗೂ ಲಿಂಗಕ್ಕೂ ಸಂಪರ್ಕವೆಂಬ ಮುಖ್ಯಾರ್ಥಕ್ಕೆ ವಿರೋಧವು ತಗಲದ ಕಾಲವು ಪ್ರಬಲವಾಗಿ ಅದೇ ಗ್ರಾಹ್ಯವಾಗುತ್ತದೆ. ಹೇ

ಗಂದರೆ ಛಾಂದೋಗ್ಯದಲ್ಲಿ "ಸದೇವಸೋಮ್ಯೇದಮಗ್ರ ಆಸಿದೇಕಮೇ ವಾದ್ವಿತೀಯಂ" ಎಲೈ ಸೋಮ್ಯನೆ ನಾಮರೂಪಾತ್ಮಕವಾದ ಜಗತ್ತು ಸೃಷ್ಟಿಯ ಪೂರ್ವದಲ್ಲಿ ಸದ್ರೂಪವೆಯಾಗಿತ್ತು ಎಂದು ಹೇಳಿ ಆಸತ್ತಿನಿಂದ ಜಗತ್ತಿನುತ್ಪತ್ತಿಯನ್ನು ಪ್ರತಿಪಾದಿಸುವಲ್ಲಿ "ತತ್ತೇಜೋऽಸೃಜತ" ಎಂದು ತೇಜೋಭೂತೋತ್ಪತ್ತಿಯು ಪ್ರಥಮ ಸೃಷ್ಟಿಯಾಗಿ ಹೇಳಲ್ಪಡುತ್ತದೆ. ತೈತ್ತಿರೀಯದಲ್ಲಿ "ತಸ್ಮಾದ್ವಾ ಏತಸ್ಮಾದಾತ್ಮನ ಆಕಾಶಃ ಸಂಭೂತಃ ಆಕಾಶಾದ್ವಾಯುಃ ವಾಯೋರಗ್ನಿಃ ಅಗ್ನೇರಾಪಃ ಅದ್ಭ್ಯಃ ಪೃಥಿವೀ" ಎಂದು ಆಕಾಶದ ಉತ್ಪತ್ತಿಯೂ ವಾಯುವಿನ ಉತ್ಪತ್ತಿಯೂ ಅಗ್ನಿಯ ಉತ್ಪತ್ತಿಗಿಂತ ಪೂರ್ವದಲ್ಲಿ ಹೇಳಿಯದೆ. ಅಂದಬಳಿಕ ಅಗ್ನಿಯ ಉತ್ಪತ್ತಿಯಾದಂತೆ ಆಕಾಶವಾದರು ಬ್ರಹ್ಮದಿಂದ ಜನಿಸಿತೆಂದರ ಅಗ್ನಿಯು ಮೂರನೆಯ ಭೂತವಾದಿತು. ಆದರೆ ಛಾಂದೋಗ್ಯಶ್ರುತಿಯು ಅಗ್ನಿಗೆ ಪ್ರಥಮಜತ್ವವನ್ನು ಹೇಳುತ್ತದೆ ಎಂಬ ಸಂದರ್ಭದಲ್ಲಿ ಜಗತ್ತೆಲ್ಲ ಬ್ರಹ್ಮದ ಕಾರ್ಯವೆಂಬ ಮುಖ್ಯಾರ್ಥಕ್ಕೆ ಅಗ್ನಿಯು ಪ್ರಥಮದಲ್ಲಿ ತದನಂತರ ಅಪ್ಪು, ತದನಂತರ ಭೂಮಿಯೆಂಬ ಕ್ರಮದಿಂದ ಭಂಗ ಬರುವುದರಿಂದ ಆ ಮುಖ್ಯಾರ್ಥಕ್ಕೆ ಬಾಧೆಯು ಬಾರದಂತೆ ಬ್ರಹ್ಮದಿಂದ ಆಕಾಶವೂ ಆಕಾಶದಿಂದ ವಾಯುವೂ ವಾಯುವಿನಿಂದ ಅಗ್ನಿಯೂ ಉತ್ಪತ್ತಿಯಸ್ಯೆದಿದವೆಂದು ಅಗ್ನಿಯ ಪ್ರಾಥಮ್ಯವನ್ನು ನಿಷೇಧಿಸಿ ತೃತೀಯತ್ವವೂ. ಆಕಾಶವಾಯುಗಳುತ್ಪತ್ತಿಯೂ ಬ್ರಹ್ಮಮೀಮಾಂಸೆಯ ದ್ವಿತೀಯಾಧ್ಯಾಯದ ತೃತೀಯ ಪಾದದ ಪ್ರಥಮಾಧಿಕರಣದಲ್ಲಿ ಸ್ಥಾಪಿತವಾಗಿದೆ. ಆದುದರಿಂದ ಮುಖ್ಯವಾದ ಲಿಂಗತನುಗಳ ಸಂಪರ್ಕವಶದಿಂದ ಜನನಾನಂತರದಲ್ಲಿ ಲಿಂಗಧಾರಣೆಯು್ಯವುದೇ ಶಾಸ್ತ್ರಾಭಿಪ್ರಾಯವು.

ಪಂಚಕಲಶಗಳನ್ನು ಅಭಿಮಂತ್ರಿತ ಉದಕವನ್ನಿಡಲಿಕ್ಕಲ್ಲದೆ ಆಚಾರ್ಯರನ್ನು ಆಹ್ವಾನಿಸಲಿಕ್ಕೆ ಸ್ಥಾಪಿಸತಕ್ಕುದಲ್ಲ. ಇದರ ವಿವರವನ್ನು ಸುಪ್ರಭೇದ ಪ್ರಭಂಜನದಲ್ಲಿ ಮಾಡಿರುವೆನು. ಶ್ರೀಬಸವನಿಗಾದ ಲಿಂಗಧಾರಣವು ಯಥಾಶಾಸ್ತ್ರವೂ ನಿರ್ದೋಷವೂ ಆದುದು. "ಭೂತಿಪಟ್ಟಂ

ತತಶ್ಚಕ್ರೇ ಸ್ವಹಸ್ತೇನೈವದೇಶಿಕಃ । ನಿಕ್ಷಿಪ್ಯ ಮಸ್ತಕೇ ಹಸ್ತಂ ಶ
ಸ್ಯಪದ್ಮಸಮಪ್ರಭಮ್ ॥ ತಮಃಪಟಲಮುತ್ಸಾರ್ಯತತ್ಕಾರಣಶರೀ
ರಗಂಶೈವೀಂಕಲಾಂಸಮಾಕೃಷ್ಯಪರಾತ್ಪರತರಾಂಗುರುಃ। ಶಿರೋಭಾವೇ
ನಸಂಯೋಜ್ಯ ॥ ಮನಸಾಯೋಜಯತ್ಸ್ವಯಂ । ಮನಸಾದೃಷ್ಟಿದೇ
ಶಂತು. ನೀತ್ವಾತಾಂಪರಮಾಂಕಲಾಂಷಡಧ್ವಶೋಧಿತಂ ಲಿಂಗಂ ಚಂದ್ರ
ಕಾಂತಶಿಲಾಮಯಂ । ನೀತ್ವಾತತ್ರಕಲಾಂಸೂಕ್ಷ್ಮಾಂಸನ್ನಿವೇಶ್ಯಕೃಪಾನಿ
ಧಿಃ । ಶೈವೀಂಪಂಚಾಕ್ಷರೀಂಪುಣ್ಯಾಂಪ್ರಣವೇನಸಮನ್ವಿತಾಂ । ನಿಗೂ
ಢಂದಕ್ಷಿಣೇಕರ್ಣೇ ಜಜಾಪಪರಮೇಶ್ವರಃ । ತತಸ್ತತ್ಕಂಠದೇಶೇತುಚ
ಕ್ರೇಲಿಂಗಸ್ಯಧಾರಣಂ ॥ ಬ. ಅ. ೪, ಶ್ಲೋಕ ೩೭-೪೧.

ಗುರೂತ್ತಮನಾದ ಷಡಕ್ಷರನು—ಪರಮಕೃಪಾರಸಾರ್ದ್ರನಯ
ನಾಂಚಲದಿಂನಡೆನೋಡಿಪಾಣಿಯಂ । ಕರುಹಮನಿಟ್ಟು ಮಸ್ತಕದೊಳುದ್ಧ
ವಿಭೂತಿಯನೊಲ್ದುಫಾಲದೊಳ್ಧರಿಯಿಸಿಲಿಂಗಸಂಗತನಿಜಾಂಗನನಾಗಿ
ಮೂಲಮಂತ್ರಮಂ । ತರುಣನ ಕರ್ಣದೊಳ್ತಿಳುಪಿ ದೀಕ್ಷೆಯನಿತ್ತನಮ
ಸದಾಶಿವಂ ॥ ವೃ. ೩-೧೯ ॥

ದುರ್ವಿದಗ್ಧಕೃದ್ಭೀಮ ಭೀಮನು ಆ ತನಯನೊಳಗಿಹ ಶಿವಂ ವಿ
ಖ್ಯಾತಗುರ್ವಾಕಾರಮಂ ತಾ । ಛಾದ್ಯತನಂಗದ ಮೇಲೆ ಲಿಂಗಾಸಂಗಮಂ
ಮಾಡಿ ॥ ಬ, ೩, ಸ, ೨೪.

ಉನ್ಮೀಲ್ಯಚಕ್ಷುರ್ಮುಕುಲೀಕೃತಾಂಗಃ ಶಿಶುರ್ನಚಾಂಚಲ್ಯಮ
ವಾಪಕಿಂಚಿತ್ । ಯದಾತದಾಭ್ಯೇತ್ಯತುಸಂಗಮೇಶೋದಧೌತದಂಗೇಸಹ
ಜೇಷ್ಟಲಿಂಗಂ ॥ ಸ್ವಭಕ್ತಸಾಮ್ರಾಜ್ಯಮಹಾಧಿಪತ್ಯೇ ಪಟ್ಟಾಭಿಷೇಕ
ಹೃದಯೇನಕುರ್ವನ್ । ಧೃತ್ವಾಲಲಾಟೇಭಸಿತಂಸುದೀಪ್ತಂ । ನಾಮಾ
ಥಚಕ್ರೇಬಸವೇತಿವಿಶಃ ॥ ತನ್ಮಸ್ತಕೇಹಸ್ತತಲಂನಿಧಾಯಮಾಯಾ
ನಿಕಸ್ಯೋಪದಿದೇಶಕರ್ಣೇ । ಪಂಚಾಕ್ಷರಂಸಪ್ರಣವಂಸತತ್ವಂಸಕೀಲ
ಕಂಸಾರ್ಥಮಥೋಮಹೇಶಃ ॥ ಪ್ರ. ೯, ಅ. ೨೩-೭೫ ಶ್ಲೋ.

ಬಸವನು ಬಾಗವಾಡಿಯಲ್ಲಿ ಜನಿಸಿದನೆಂದು ಸರ್ವ ಪುರಾಣಗಳು
ಒಪ್ಪುತ್ತಿವೆ. ಸಂಸ್ಕೃತ ಪ್ರಭುಲಿಂಗಲೀಲೆಯಲ್ಲಿಯು ಇಂಗಳೇಶ್ವರವು

ಸಂಸ್ಕೃತ ಬಸವ ಪುರಾಣದ ಬಾಗವಾಡಿಯಿಂದ ಬೇರೆಯಲ್ಲ. "ಗುರು ಶರೋನ್ನತವಾಗೆಸೆವಸಿರಿ । ಗಿರಿಯುಪಶುಪಟಾಕಡೆಯಧರೆಯೊಳು । ನರವರಾಸ್ಪದವೆನಿಸಿದಾಕರ್ಣಾಟದೇಶದೊಳು ॥ ಚರಮೆಸೆದುದಲ್ಲಿ ಪ್ರಸಿದ್ಧದಿ । ಸಿರಿಗೆನಿಪಶಿವಭಕ್ತಿಬೀಜ । ಕ್ಕರವೆನಿಸಿಸಿದೊಂದಿಂಗಳೇಶ್ವರಬಾಗವಾಡಿಯಲಿ ॥ ಬ. ೨ ಸ. ೪೫ ಪ. ॥ ಈಗಲಾದರು ಇಂಗಳೇಶ್ವರವು ಬಾಗವಾಡಿಗೆ ಹೊಂದಿಯೆ ಉಂಟು. ಕಾಲಕ್ರಮದಿಂದ ದೊಡ್ಡ ನಗರವು ಹಾಳಾಗಿ ಛಿದ್ರವಾದ ಕಾರಣ ಮೈಲು ಒಂದೂವರೆ ಮೈಲು ಅಂತರ ಬೀಳುವುದು ದೊಡ್ಡ ಮಾತಲ್ಲ.

ಬಸವನಿಗೆ ಬಸವನೆಂಬ ಅಭಿಧಾನವನ್ನು ಜನನಾನಂತರ ದೀಕ್ಷಾ ಕಾಲದಲ್ಲಿ ಸಂಗಮೇಶನೂ ತದನಂತರ ಲೋಕರೂಢಾಚಾರದಂತೆ ಅದೇನಾಮವನ್ನು ಮಾದರಸನ ಬಳಗದವರೂ ಶಿವಭಕ್ತರೂ ಇಟ್ಟಿರುವುದರಿಂದ, ಸಂಗಮೇಶನು ಹೆಸರಿಟ್ಟನೆನ್ನುವಲ್ಲಿಯೂ ಬಳಗದವರು ಹೆಸರಿಟ್ಟರೆನುವಲ್ಲಿಯೂ ಪರಸ್ಪರವಿರೋಧವಿಲ್ಲ. ಪ್ರಭುಲಿಂಗಲೀಲೆಯಲ್ಲಿಯೆ ಈ ಸಂಗತಿಯು ಸ್ಪಷ್ಟವಾಗಿ ಹೇಳಲ್ಪಟ್ಟಿರುತ್ತದೆ. "ಮಹೇಶದತ್ತಂ ಬಸವಾಭಿಧಾನಮಾಕರ್ಣ್ಯ ಪಿತಾಪ್ರಸಿತ್ಥೈವ ಚಕ್ರೇ" ॥ ೯೩೦ ಶ್ಲೋಕಃ ಆದರೆ ನಿಂದಾಸಕ್ತರಾದ ಪಾಪಾತ್ಮರು ಪೂರ್ವಾಪರದೃಷ್ಟಿಗಳಲ್ಲ.

ಬಸವನೇ ನಂದೀಶನು ನಂದೀಶನೇ ಬಸವನೆನ್ನುವಲ್ಲಿ, ಅನಂತ ಪ್ರಮಾಣಗಳಲ್ಲಿ ಹಲವನ್ನು ಹಿಂದೆ ಉದಾಹರಿಸಿರುವೆನು. ವೀರಶೈವಧರ್ಮಶಿರೋಮಣಿಯ ೭೬ನೆಯ ಶ್ಲೋಕದಲ್ಲಿ "ಪೂರ್ವಂ ಶಿವೈಕಶರಣ್ಯೈರ್ಗರಲಂ ನಿವೇದ್ಯ । ಶ್ರೀಶಂಭವೇ ತದಮೃತಂ ಕೃತಮೇವಪೀತಂ ॥ ತಸ್ಮಾದನನ್ಯ ಶರಣಃ ಶಿವಮೇವ ಮುಕ್ತಿಂ ಯಾಚಸ್ವಮಾಸ್ತು ವಿಷಯೇ ವಿಫಲಃ ಪ್ರಯಾಸಃ ॥" ಎಲೈ ಜೀವನೆ ಪೂರ್ವದಲ್ಲಿ ಶಿವನನ್ನೊಬ್ಬನನ್ನೆ ಆಶ್ರಯಿಸಿದವರಾದ ಶರಣರು ವಿಷವನ್ನು ಶ್ರೀಶಂಭುವಿಂಗೆ ನಿವೇದಿಸಿ ಅಮೃತವನ್ನಾಗಿಸಿ ಅದನ್ನೇ ಸೇವಿಸಿದರು. ಆದುದರಿಂದ ಬೇರೆ ಹಂಬಲವನ್ನುಳಿದು ಶಿವನನ್ನು ಮೊರೆಹೊಕ್ಕವನಾಗಿ ಮುಕ್ತಿಯನ್ನು ಬೇಡು. ವಿಷಯಗಳಲ್ಲಿ ವ್ಯರ್ಥವಾದ ಶ್ರಮನ್ನು ಹೊಂದಬೇಡ, ಎಂಬ ಶ್ಲೋಕ

ದಿಂದ ಶ್ರೀಬಸವನು ನಂದೀಶ್ವರಾವತಾರನೆಂದು ಸೂಚಿಸಿರುವನು. ಹೇಗು ದರೆ ವಿಷವನ್ನು ಶಂಭುವಿಗರ್ಪಿಸಿ ಅದನ್ನು ಸೇವಿಸಿದ ಚರಿತ್ರವು. ಶ್ರೀ ಬಸವೇಶನದಲ್ಲದೆ ಬೇರೆಯವನದೆಂದು ಆರಿಗೂ ವಾದಿಸಲಿಕ್ಕೆ ಬರಲಾರದು. ಈ ಚರಿತ್ರವು, ಕನ್ನಡ ಬಸವ ಪುರಾಣದ ೫೮ನೆಯ ಸಂಧಿಯಲ್ಲಿಯೂ ವೃಷಭೇಂದ್ರ ವಿಜಯದ ೪೦ನೆಯ ಆಶ್ವಾಸದಲ್ಲಿಯೂ, ಸಂಸ್ಕೃತ ಬ ಸವಪುರಾಣದ ೩೯ನೆಯ ಅಧ್ಯಾಯದಲ್ಲಿಯೂ ಸವಿಸ್ತರವಾಗಿ ವರ್ಣಿಸ ಲ್ಪಟ್ಟಿದೆ. ಈ ಕಥೆಯ ಸಾರಾಂಶವೆಂದರೆ:— ಪೂರ್ವದಲ್ಲಿ ಚಂಡೇಶನು ಪರಮಶಿವಭಕ್ತನಾಗಿದ್ದು ಶಿವಭಕ್ತಿನಿರೋಧಿಯಾದ ತಂದೆಯ ಶಿರಶ್ಛೇದ ವನ್ನು ಮಾಡಿ ಗಣಪದವಿಯನ್ನು ಹೊಂದಿದನು, ಮತ್ತು ಅಂತಹಭಕ್ತಿ ಯೋಗದಿಂದ ಸ್ಥಾಪಿತಲಿಂಗಗಳ ನಿರ್ಮಾಲ್ಯವು ಚಂಡದ್ರವ್ಯವೆಂದುವರವ ನ್ನು ಪಡೆದನು. ಆಚಂಡನ ಸಂತತಿಯವರಾದ ಶೈವಬ್ರಾಹ್ಮಣರು ಕ ಲ್ಯಾಣದಲ್ಲಿ ಶ್ರೀಬಸವಾದಿ ಪ್ರಮಥರು ತಮಗೆ ಇಷ್ಟಲಿಂಗಪ್ರಸಾದವ ನ್ನು ಒಪ್ಪಿಸುವುದಿಲ್ಲ. ಲಿಂಗಪ್ರಸಾದವೆಂಬುದೆಲ್ಲವು ನಮ್ಮ ದ್ರವ್ಯವ ಆದುದರಿಂದ ಈ ಅನ್ಯಾಯವನ್ನು ತಪ್ಪಿಸಿ ಬಸವಾದಿ ಪ್ರಮಥರು ನಮ ಗೆ ಲಿಂಗಪ್ರಸಾದವನ್ನು ಒಪ್ಪಿಸುವಂತೆ ಆಜ್ಞಾಪಿಸಬೇಕೆಂದು ಬಿಜ್ಜಳನ ನ್ನು ಬೇಡಿಕೊಂಡರು ಆಗ ಬಸವೇಶನು ಅನೇಕ ಶಾಸ್ತ್ರ ಪ್ರಮಾಣ ಗಳಿಂದ ಇಷ್ಟಲಿಂಗ ಪ್ರಸಾದವು ಚಂಡದ್ರವ್ಯವಲ್ಲೆಂದು ಸಿದ್ಧಗೊಳಿಸಿದ ನು. ಮುಂದೆ ಪ್ರತ್ಯಕ್ಷ ಪ್ರಮಾಣದಿಂದ ಸ್ವಪಕ್ಷ ಸ್ಥಾಪನವನ್ನು ಮಾಡಬೇಕೆಂದಾಯಿತು. ಆಗ ಬಸವೇಶನು ಚಂಡವಂಶೀಯರಿಗೆ ಏನಯ್ಯ ನೀವು ಇಷ್ಟಲಿಂಗಾರ್ಪಿತವಾದ ವಿಷವನ್ನು ಸೇವಿಸಲೊಪ್ಪುವಿರಾ ಎಂದು ಕೇಳಿದನು. ಅದಕ್ಕವರು "ಎಲೈ ಬಸವನೆ ಒಳ್ಳೆ ಥಂಚಿಕೆಯನ್ನು ಹು ಡುಕಿದೆ. ನಮಗೆ ವಿಷವಂನುಣಿಸಿ ಎದುರಾಳಿಗಳನ್ನು ನೀಗುವ ಹೊಲಬು ಬಹು ಜಾಣ್ಮೆಯುಳ್ಳುದು" ಎಂದು ಹೀಯಾಳಿಸಿ "ಬಸವ! ನೀನೂ ನಿನ್ನವರೂ ಇಷ್ಟಲಿಂಗಕ್ಕೆ ವಿಷವನರ್ಪಿಸಿ ಸವಿದಿರಾದರೆ ನೀವೆ ಇಷ್ಟ ಲಿಂಗ ಪ್ರಸಾದಕ್ಕರ್ಹರು. ನಾವು ಅನರ್ಹರೆಂದು ಸಿದ್ಧವಾಗುತ್ತದಲ್ಲ! ನೀವೇ ಸುಳಿಸಿ ತೋರಿಸಲಾಗದೆ?" ಎಂದು ಪಣವನಿಕ್ಕಿದರು. ಅದನ್ನು ಬಸವವೇಶನು ಕೈಕೊಂಡನು ಶರಣರೆಲ್ಲರು ಅತಿಘೋರವಿಷಗಳ ಪಾಕವ

ನ್ನು ಸ್ವೇಷ್ಟಲಿಂಗಕ್ಕಿತ್ತು ಹೊಟ್ಟೆದಣಿಯುಂಡರು. ನೋಡು:—ಒಲಿ ಗೊಂಡು ಸಮಸ್ತಭಕ್ತಜ । ನಾಳಿ ಸಹಿತಂ ಬಸವ ಮಂತ್ರಿಶ್ರೀ । ವಾಲಯು ಕೆ ನಡೆತಂದು ಪರಮಾನಂದದಿಂದಂದು ॥ ಕಾಲಕೂಟಂ ವತ್ಸನಾಭಿಯುಂ । ಹಾಲಹಲಮುಂ ಸಿಂಗಿಮೊದಲಾ । ಭೀಳಗರಳಂಗಳನವೆಲ್ಲಂ ಕಲಸಿ ಅರೆಯಿ ಸುತ॥ ಘನವಿಷಮತರವಾಗಿವಿಷಸಂ । ಜನಿತ ಸೌರಭವಂತು ಸೋಂಕಲೊ। ಡನೆಧರೆಯ ಜೀವಿಗಳಸುಗಳಂ ಬಿಟ್ಟುವಿದ್ದಂತೆ ॥ ಘನಪಥದೊಳಾಡುವಖ ಗಂಗಳ । ವನಿಗೆಬಿದ್ದುಸುರುಡುಗಿದವುಸುಂ । ಮನೆಯಂದವರ ಕರುಳು ತುಂಡಿಸಿ ಬೀಳುತಿರ್ದಪವು ॥ ಎಂದು ಭೀಮನೂ । ಭರದಿಂದಂ ವತ್ಸನಾಭ ಪ್ರಮುಖ ಬಹು ವಿಷವ್ರಾತವಂ ಕೂಡಿಸರ್ವೋ । ರ್ವರೆಗತ್ಯಾಶ್ಚ ರ್ಯಮಂ ತಾನೆಸಗೆ ತರೆಯಿಸುತ್ತಿರ್ದನಾವೇಳೆಯೊಳ್ತ । ದ್ಗರಳಾಭೀಳ ಸ್ಫುರತ್ಸೌರಭಮುಲೆಯೆ ಧರಾಜೀವಿಗಳ್ ಜೀವಮಂಬಿ । ಟ್ಟರದೆತ್ತಂ ಪ ಕ್ಷಿವೃಂದಂ ಕೆಡೆದಸುಗಳದತ್ತಭ್ರದಿಂ ಪೇಳ್ವೆನೇನಂ॥ ಎಂದು ಷಡಕ್ಷ ರನೂ ॥ ಏವ ಮುಕ್ತ್ವಾತು ಬಸವಃ ಪುರಸ್ತಾತ್ಪ್ರತಿವಾದಿನಾಂ ॥ ಸಾ ರ್ಪಂವಿಷಂ ಕಾಲಕೂಟಂ ವತ್ಸನಾಭಂ ಮಹೋಜ್ವಲಂ ॥ ವಿಷವೃಕ್ಷ ತ್ವಚಂ ಚೈವ ಬ್ರಹ್ಮಪುತ್ರಂ ಹಲಾಹಲಂ । ಅತಿಕ್ರೂರ ವಿಷಾಣ್ಯೇವ ಮಾದೀನ್ಯತ್ಯಂತವೇಗತಃ ॥ ಆನಯಾಮಾಸ ಬಸವಃ ಶಿವಭಕ್ತೈಃ ಸ ಮಾವೃತಃ ॥ ಪೇಷಯಾಮಾಸ ವೇಗೇನ ಸ್ವಭೃತ್ಯೈರ್ಬಲದರ್ಪಿತೈಃ॥ ಏತದ್ವಿಕ್ಷ್ವೇಡಜ್ವಾಲಾಭಿರಂಶುಮಾನ್ಮಂದತಾಂ ಗತಃ ॥ ತ್ರೈಲೋ ಕ್ಯಂ ಕಂಪಯಾಮಾಸ ಸಚರಾಚರಸಮಾಕುಲಂ॥ ಪಕ್ಷಿಣೋಪಿಮೃತಾಃ ಸ ರ್ವೇ ಕ್ರೋಶಂತೋದಗ್ಧಪಕ್ಷಕಾಃ । ಸರ್ವೇ ಪಿಮೂರ್ಛಿತಾಃ ಸಂತಃ ಪೇತುರ್ನಕ್ಷತ್ರಪಂಕ್ತಯಃ ॥ ಬ್ರಹ್ಮಾಪಿಭಯಮಾಪನ್ನೋ, ದಿಗೀಶಾ ಶ್ಚಚಕಂಪಿರೇ ॥ ಪುನರುತ್ಪನ್ನಮಭವತ್ಕಾಲಕೂಟಂ ಕಿಮಂಬುಧೇಃ । ಶಿವೇನವಾ ಕಿಮುದ್ಭ್ರಾಂತಮಿತಿದೇವೋಜನಾರ್ದನಃ । ಪರಮಾಂ ಭೀತಿಮ ಗಮದಿತ್ಥಂ ಜಾತೇವಿಷಾನಲೇ ॥ ಎಂದು ಸಂಸ್ಕೃತ ಬಸವಪುರಾಣವೂ ಈ ಘೋರ ವಿಷವನ್ನು ವರ್ಣಿಸಿರುವರು. ಬಸವನೂ ಶಿವಶರಣರೂ ಆ ವಿಷವನ್ನು ಪ್ರಸಾದ ರೂಪದಿಂದ ಸೇವಿಸುವುದನ್ನು ಕಂಡು ಭಕ್ತರಿ

ಕಾರ್ಥಮಾಗ । ಲ್ಕೆಂದು ತಾ ನಿರ್ವಂಚಕ ಬೊಳೊಲ । ವೊಂದಿ ಆರೋಗಿಸಿದ ನಾಗಳಪೂರವಾಗಿದ್ದು೯ ॥ ಅಂಡಮೃತಮಂ ಕುಡಿದು ಅಮರರು। ಸಂದಿಹರು ಪಳಯಕ್ಕೆ ಬಸವನ।ಮುಂದವಿಷಮಂ ಪೀರ್ದ ಸಮದಿವ್ಯಾಂಗನಾದನಲ॥ಎಂದು ಭೀಮನೂ "ಅಂಗಜ ವೈರಿಸುಂಗಲಗಿಡೊಯ್ಯನೆ ಭೀಕರ ಕಾಲಕೂಟಮಂ। ತುಂಗಗಳ ಸ್ಥಳಾಂತರದೊಳಾಂತನದಂಜವದಿಂ ಕೊರಲ್ವರಂ।ಪಿಂಗದೆಪೀರ್ದೆ ನಿನ್ನಯ ಮಹತ್ವಮಿದದ್ಭುತಮದ್ಭುತಂಕೃಪಾ। ಸುಗತಚಿತ್ತನಿನ್ನಳವನಾರ್ತಿಳಿವರ್ವಮಹಿಯೊಳ್ವೃಷಾಧಿಪ"॥ ಎಂದು ಷಡಕ್ಷರನೂ "ಏವ ಮುಕ್ತ್ವಾಶು ಬಸವೋ ಗೃಹೀತ್ವಾ ದಾರುಣಂ ವಿಷಂ। ಸ್ವವೇದಯತ್ಸ್ವಭಕ್ತಾನಾಮಾಚಾರ್ಯಾಣಾಂ ಮಹಾತ್ಮನಾಂ ॥ ತತಸ್ತೇ ಸ್ವೀಯಲಿಂಗಾನಾಂವಿನಿವೇದ್ಯಾತಿಭಕ್ತಿತಃ। ವಿಷಂತದ್ಭೋಜಯಾಮಾಸುರ್ಮಾಚಿದೇವಪುರೋಗಮಾಃ ॥ ಗಾಯಂತೋನರ್ತಯಂತಶ್ಚ ಭಾಷಯಂತಃ ಪರಸ್ಪರಮ್ ಯಾವತ್ತೋಸ್ವೇದರಪೂರ್ತಿಃಸ್ಯಾತ್ತಾವದ್ಭೋಜ್ಯೇರಂ ವಿಷಂ ಪಪುಃ ॥ ಎಂದು ಸಂಸ್ಕೃತ ಬಸವಪುರಾಣವೂ ವರ್ಣಿಸಿರುವುದು.

ಇರಲಿ, ಹಿಂದಿನ ಮಹಾತ್ಮರ ಸಾಕ್ಷಿಗಳು ಸಾಕು—ಶ್ರೀಬಸವೇಶನ ವಚನಗಳೆಂಬ ದರ್ಪಣದಲ್ಲಿ ಮಾಪೋಳೆಯುವ ಆತನ ರೂಪವನ್ನು ಶಿವಾಗಮಗಳಲ್ಲಿ ಗದಿತವಾದ ವೀರಶೈವದೊಡನೆ ಹೋಲಿಸಿ ನೋಡುವ.

ವೀರಶೈವ ಸಿದ್ಧಾಂತವು ಆರು ಅಂಗ, ಆರು ಲಿಂಗ ಸ್ಥಳಗಳಲ್ಲಿ ಹುಳುಕಿಯದೆ. ಆಗಮಗಳಲ್ಲಿ ಈ ಸ್ಥಳವಿಚಾರಗಳು ಸ್ಥಾಪಿತವಾಗಿವೆ ಅವುಗಳನ್ನು ನಂಮ ಆರಾಧ್ಯ ದೇವತೆಯಾದ ಬಸವನು ತನ್ನ ವಚನಗಳಲ್ಲಿ ಶಿವೋಕ್ತಿಗಿಂತ ಕಡಿಮೆ ಸರಸವಾಗದಂತೆ ಹೇಳಿರುವನು.

## ಅಂಗಸ್ಥಳಗಳು.

ಭಕ್ತ:— ತ್ಯಕ್ತಾಭಿಮಾನೋ ದೇಹಾದೌ ಭಕ್ತ ಇತ್ಯುಚ್ಯತೇ ಬುಧೈ । ಸೂ । ದೇಹಾದಿಯಲ್ಲಿ ಅಭಿಮಾನವಬಿಟ್ಟವನು ಭಕ್ತನು. ಈ ದೇಹಾದಿಗಳು ಶಿವಾಚಾರಯುತವಾದ ಧರ್ಮಾಚರಣವಲ್ಲದೆ ಇತರ ಪ್ರಯೋಜನವುಳ್ಳವುಗಳಲ್ಲೆಂದು ವೀರಶೈವಾಚಾರಾನುಷ್ಠಾನದಲ್ಲಿಯೆ ದೇಹಾದಿ

ಳನ್ನು ವಿನಿಯೋಗಿಸುವಾತನು ಭಕ್ತನೆಂಬರ್ಥ. ಇದಕ್ಕೆ ಬಸವನ ವ ಚನ " ಕೆಡುವ ಒಡಲನೆ ನೆಚ್ಚಿ ಕಡುಹುಸಿಯನೆ ಹುಸಿದು ಒಡಲ ಹೊರೆ ವರ ಕೂಡಲಸಂಗಮದೇವನೊಲ್ಲ ಕಾಣಿರಂಣಾ ". ಭ ೧೩೦ ಈ ಶರೀರವು ಒಂದು ದಿನ ಅಳಿಯುವುದೇ ಅದನ್ನು ಹೊರೆಯಲಿಕ್ಕೆ ಸಂಸಾರಿಗಳು ಹಲ ಕೆಲವು ಸುಳ್ಳು ಮಾರ್ಗಗಳನ್ನು ತುಳಿಯುವರು. ಅಂತಹರನ್ನು ಶ್ರೀ ಗುರು ರೂಪನಾದ ಪರಶಿವನು ಮೆಚ್ಚನು. ಅದರಿಂದ ಈ ಸುಳ್ಳು ದೇಹ ದಲ್ಲಿ ಅಭಿಮಾನವನು ಬಿಟ್ಟು ಸತ್ಯ ಧರ್ಮದಿಂದ ನಡೆದು ಪರಶಿವ ವನ್ನು ಮೆಚ್ಚಿಸಬೇಕು.

ಮಾಹೇಶ್ವರ :— " ತಚ್ಚಿತ್ತಮಮಲಂಯಸ್ಯಸವೈ ಮಾಹೇಶ್ವ ರಃ ಸ್ಮೃತಃ " ॥ಸೂ॥ ಭಕ್ತಿ ಕ್ರಿಯಾಚಾರದಿಂದ ಆವಾತನ ಮನವು ನಿ ರ್ಮಲವಾಗಿದೆಯೊ ಆತನು ಮಾಹೇಶ್ವರ ನೆನಿಸಿದನು. ಕೇವಲ ಬಾಹ್ಯ ಕ್ರಿಯೆಗಳಿಂದ ಪರಮಾತ್ಮನು ಮೆಚ್ಚಲಾರನು. ಹೊರಗೆ ಆಚಾರವು ಶುದ್ಧವಿದ ಂತೆ ಒಳಗೆ ವಿಚಾರವು ಶುದ್ಧವಿರಬೇಕು. ಬಾಯಿಂದ ನುಡಿ ಗಳು ಸುಲಭವಾಗಿ ಆಡಲಿಕ್ಕೆ ಬಂದಂತೆ ನಡವಳಿಯಾದರು ಸರಿ ಇರಬೇಕು. " ಕುಳ್ಳಿರ್ದಲ್ಲಿ ಲಿಂಗವ ಪೂಜಿಸಿ ಅಲ್ಲಿಂದಾಟವನಾಡುವರಯ್ಯ, ಬೆಳ್ಳ ತಿಂನ ಘುರದಲ್ಲಿರ್ದ ಹುಲಿಗಂಬ ತೋಡುವಂತೆ । ಕಳ್ಳ ಹಾದರಿಗನ ಕೈಯಲ್ಲಿ ಪೂಜೆಯ ಕೊಳ್ಳನು ನಂಮ ಕೂಡಲ ಸಂಗಮದೇವ ॥ ನುಡಿ ಯಲ್ಲಿ ಎಚ್ಚತ್ತು ನಡೆಯಲ್ಲಿ ತಪ್ಪಿದರೆ ಹಿಡಿದಿರ್ದ ಲಿಂಗವು ಘಟಸರ್ಪ ನೋಡಯ್ಯ । ನುಡಿಯಬಾರದು ನಡೆಯಲು ಬಾರದು ಲಿಂಗದೇವನೆ ದಿ ವ್ಯವೊ ಅಯ್ಯ । ಮಾಹೇಶ್ವರ ಸ್ಥಳದ ೧೬೦.

ಪ್ರಸಾದಿ:— ಚಿತ್ತಂ ಶುದ್ಧಂ ಭವೇದ್ಯಸ್ಯ ಸಪ್ರಸಾದೀಭವತ್ಯ ಸೌ॥ಸೂ॥ ಶಿವನಿಷ್ಠೆಯಿಂದೆ ದುರ್ಬುದ್ಧಿಗೆ ಕಾರಣವಾದ ದುರಾಚಾರಗಳು ಇಲ್ಲವಾಗುತ್ತಿರಲು, ಬುದ್ಧಿಯು ಶುದ್ಧವಾದುದೆ ಪ್ರಸಾದಿಸ್ಥಳವು. ಮನಃಶುದ್ಧಿಯೆಂದರೆ ಭೋಗೋಪಭೋಗಗಳಲ್ಲಿ ಮನವು ತೊಡಕಿರುವು ದಳಿದು ಸದಾನಂದಮಯವಾಗಿರುವುದು. " ಹೊಲ್ಲೆನೆಂಬುದು ವೈರಾ ಗ್ಯ ಒಲುವೆನೆಂಬು ಕಾಯಗುಣ. ಆವಪದಾರ್ಥ ತಾನಾದರೇನು ? ತಾ

ನಿರ್ಧಡಿಗೆ ಬಂದರೆ ಲಿಂಗಾರ್ಪಿತವ ಮಾಡಿ ಭೋಗಿಸುವುದಾಚಾರ" ಬ.ವ. ವಿಷಯಲೋಲುಪನಿಗೆ ಹಲವು ಪದಾರ್ಥಗಳು ಬೇಡೆನಿಸಬಹುದು. ಅವುಗಳಲ್ಲಾತನು ವೈರಾಗ್ಯವ ಅಂದರೆ ಇವು ನನಗೆ ಬೇಡ ಎಂಬ ಮತಿಯನ್ನು ಮಾಡುವನು. ಅದರಂತೆಯೆ ಬೇಕೆನಿಸಿದ ಒಡವೆಯನ್ನು ಒಡಲು ತಾನಾಗಿಯೆ ಭುಂಜಿಸುವುದು. ಆದರೆ ಲಿಂಗಸಂಗಿಯು ಅನಾಯಾಸದಿಂದ ನಿಷಿದ್ಧವಾಗದ ಆವುದಾನೊಂದು ಪದಾರ್ಥವು ತಾನಾಗಿ ಒದಗಿರುವುದನ್ನು ಲಿಂಗಾರ್ಪಿತವ ಮಾಡಿ ಸ್ವೀಕರಿಸುವನು. ನಿಷೇಧಾನಿಷೇಧವನಲ್ಲದೆ ರುಚ್ಯರುಚಿಯನ್ನು ನೋಡನು. ಇದರಿಂದ ರಾಗದ್ವೇಷಾದಿಗಳಿಲ್ಲದಂತಾಗಿ ಮನವು ಶುದ್ಧವಾಗುವುದು. ಪದಾರ್ಥಗಳು ಬೇಕೆನ್ನುವುದೇ ರಾಗ, ಬೇಡೆನುವುದೇ ದ್ವೇಷವಲ್ಲದೆ ಬೇರೆ ರಾಗದ್ವೇಷಗಳೆಂತು ತೋರಲರಿಯುವಷ್ಟೆ !

ಪ್ರಾಣಲಿಂಗಿ:—"ತ್ಯಕ್ತ್ವಾಜೀವಪ್ರಭವಮಂಚಾಯಂ ಲಿಂಗಾತ್ಮಾ ಪ್ರಾಣಲಿಂಗಕಃ" ॥ ಸೂ ॥ ವಿಷಯೋಪರಾಗವಿಲ್ಲದರಿಂದ ನಿರ್ಮಲವಾದ ಅಂತಃಕರಣದಲ್ಲಿ ಸ್ವರೂಪವು ಪ್ರಕಾಶವಾಗ ಹತ್ತುವುದು. ಆಗ ನಾನು ದೇಹಾದಿರೂಪನು ಎಂಬುವುದು ತೋರದೆ ನಿತ್ಯ ಪ್ರಕಾಶರೂಪನು ನಿರವಯವನು ಎಂಬುದು ಮೊದಲಾಗಿ ತನ್ನ ಶಿವರೂಪವು ತೋರುವುದು, ಅದೇ ಪ್ರಾಣಲಿಂಗಿಯ ಸ್ಥಳವು. "ತನು ನಿಮ್ಮದೆಂದಬಳಿಕ ಎನಗೆ ಬೇರೆ ತನುವಿಲ್ಲ, ಮನವು ನಿಮ್ಮದೆಂದಬಳಿಕ ಎನಗೆ ಬೇರೆ ಮನವಿಲ್ಲ, ಧನ ನಿಮ್ಮದೆಂದಬಳಿಕ ಎನಗೆ ಬೇರೆ ಧನವಿಲ್ಲ, ಇಂತೀ ತ್ರಿವಿಧವು ನಿಮ್ಮದೆಂದರಿತಬಳಿಕ ಎನಗೆ ಬೇರೆ ವಿಚಾರವುಂಟೆ ? ಕೂಡಲ ಸಂಗಮದೇವ । ಪ್ರಾಣಲಿಂಗಿ ಸ್ಥಳದ ೩೦ ವಚನಃ—ಶುದ್ಧ ಮನಸಿನಿಂದ ಲಿಂಗಭೋಗೋಪಭೋಗಿ ಯಾದುದರಿಂದ ವಿಷಯಗಳಲ್ಲಿ ವಾಸನೆಯು ಇಲ್ಲವಾಗುತ್ತ ನಡೆಯಿತು. ದೇಹವೆಂಬ ಮೋಡವು ವಿಷಯವಾಸನೆಗಳೆಂಬ ಧೂಮದಿಂದಲೆ ಪುಷ್ಟವಾಗುತ್ತಿರುವುದರಿಂದ ಪ್ರಸಾದವೆಂಬ ಪ್ರಚಂಡ ಶಿಖಿಯು ವಿಷಯವಾಸನೆ ಎಂಬ ಧೂಮರಾಶಿಯನ್ನು ದೂರೀಕರಿಸುದಾಗುತ್ತಿರಲು ಈ ಶರೀರವೆಂಬುದು ತಾಮಸವಾಗಿ ತೋರದೆ ಲಿಂಗಸ

ಬಂಧದಿಂದ ಲಿಂಗಶರೀರವಾಗಿಯೂ ಲಿಂಗ ಧ್ಯಾನದಿಂದ ಮನವು ಲಿಂಗಮ್ಮ ನವಾಗಿಯೂ ಲಿಂಗಶರೀಠಮನಗಳಿಂದ ಅಹಂಕಾರ ವಳಿದುದರಿಂದ ತತ್ಪ್ರೇರಿತವಾದ ವಾಯುವಿನ ಅಂದಳಿ ಪ್ರಾಣದ ಭೂತಪ್ರಾಣತೆಯಿಳಿದು ಅದು ಲಿಂಗಕ್ರಿಯಾತ್ಮಕವಾಗಿಯೂ ತೋರುವುದು ಅದರಿಂದಲೆ ನನ್ನದೀಥ ನವು ನನ್ನ ಶರೀರ ವ್ಯಾಪಾರಜನ್ಯವಾದುದು ಎಂಬುದಳಿದು ಶರೀರವು ನಃಪ್ರಾಣಗಳಲ್ಲಿ ಲಿಂಗಚೈತನ್ಯವೆ ಒಡೆದು ತೋರುವುದು. ಆಗ ಜೀವ ಭ್ರಮೆಯು ಇಲ್ಲದಾಗುವುದು.

ಶರಣ:—“ಶಿವನಿತ್ಯತ್ವನಿಶ್ಚಿಂತಃ ಸಾನಂದಃ ಶರಣೋಭವೇತ್” ॥ ಸೂ ॥ ಪ್ರಾಣಲಿಂಗಿಸ್ಥಲದಲ್ಲಿ ಜೀವಭ್ರಾಂತಿಯುಳಿಯಿತು. ಜೀವಸ್ಥಿತಿಯಂಬುದು ಅಣುತ್ವ ಅಥವಾ ಸಂಕೋಚವುಳ್ಳದೆಂದು ಶೈವ ಶಾಸ್ತ್ರಗಳು ಹೇಳುತ್ತವೆ. ಈ ಸಂಕುಚಿತ ಸ್ಥಿತಿಯಲ್ಲಿ ಅನಿತ್ಯವಾದ ದೇಹಾದಿಗಳಲ್ಲಿ ತಾನೆಂಬ ಬುದ್ಧಿಯೂ ಶಬ್ದಾದಿ ವಿಷಯಗಳಲ್ಲಿ ತನ್ನವೆಂಬ ಮಮತೆಯೂ ಸ್ವಾಭಾವಿಕವಾಗಿರುವುವು. ದೇಹಾದಿಗಳು ಕೃಶ ಸ್ಥೂಲಾದ್ಯವಸ್ಥೆಗಳನ್ನು ಆವಾಗಲೂ ಹೊಂದುತ್ತಲಿರುವುದರಿಂದಲೂ ಶಬ್ದಾದಿಗಳು ಒಂಮೆ ಲಭಿಸಿ ಮತ್ತೊಂಮೆ ಲಭಿಸದಿರೋಣದರಿಂದಲೂ ಅವು ಒದಗಿದಾಗಲು ಅನುಕೂಲ ಪ್ರತಿಕೂಲಗಳಾಗಿರುವುದರಿಂದಲೂ ಜೀವನು ಚಿಂತಾತರಂಗಗಳಲ್ಲಿ ಅಲೆದಾಡುತ್ತಿರುವನು. ಆತ್ಮನ ಶಿವಭಾವವು ಸ್ವಾನುಭವ ಗೋಚರವಾಗಹತ್ತಲು ದೇಹಾದಿಗಳಲ್ಲಿಯ ಅಹಂ ಮತಿಯು ವಿಷಯಾದಿಗಳಲ್ಲಿಯ ಮಮತ್ವಾಭಿಮಾನವೂ ಗಲಿಸಿ ನಿಶ್ಚಿಂತನಾಗಿ ಆನಂದಮಯನಾಗುವನು. ಇದೀಗ ಶರಣ ಸ್ಥಲವು ಇದನ್ನೆ ಬಸವನ ವಚನದಲ್ಲಿ ನೋಡಿರಿ:—ಧನದಲ್ಲಿ ಶುಚಿ ಪ್ರಾಣದಲ್ಲಿ ನಿರ್ಭಯ ಇಪಾವಂಗಳವಡುವುದಯ್ಯ ನಿಧಾನ ತಪ್ಪಿ ಬಂದರೆ ಒಲ್ಲೆನೆಂಬುವರಿಲ್ಲ, ಪ್ರಮೋದ ವಶಬಂದರೆ ಹುಸಿಯೆಂಬುವರಿಲ್ಲ ನಿರಾಶೆ ನಿರ್ಭಯ ಕೂಡಲ ಸಂಗಮದೇವ ನೊಲಿದ ಶರಣಂಗಲ್ಲದಿಲ್ಲ। ಶರಣ ಸ್ಥಲ ೧. ಶಿವಸ್ವರೂಪವಾದಾತ್ಮ ತತ್ವವೆ ತನ್ನ ಯಥಾರ್ಥ ಸ್ವರೂಪವು ಹೊರಗಣವಾದ ಶರೀರಾದಿಗಳು ಪ್ರಕೃತಿ ಕಾರ್ಯಗಳು ಅವರ ಕುಂದು ಹೆಚ್ಚುಗಳಿಂದ ತನ್ನ

ಸ್ವರೂಪಕ್ಕೆ ಕುಂದು ಹೆಚ್ಚುಗಳಿಲ್ಲ. ಅದರಿಂದ ನಿತ್ಯನಾದ ತನಗೆ ವಿಷ
ಯಗಳ ಹಂಗು ಇರಲಾರದು. ವಿಷಯುಗಳ ಪ್ರಾಪ್ತಿಗಾಗಿ ಸಂಪಾದಿಸ
ಬೇಕಾದ ಧನದಾಶೆಯೂ ತನಗಿಲ್ಲ. ಇಂತೆಂಬುದೊಂದು ಸ್ಥಿತಿಯಲ್ಲಿ
ನ್ಯಾಯದಿಂದ ಬಂದ ಧನವನಷ್ಟೆ ಗುರುಲಿಂಗ ಜಂಗಮ ಸೇವೆಗಾಗಿ ಸ
ಪಾದಿಸುವನಾದುದರಿಂದ ಧನದಲ್ಲಿ ಶುಚಿಯು ಮತ್ತು ಲಿಂಗಧಾರಣದಿಂ
ಲಿಂಗಮಯುವಾದ ಶರೀರದಲ್ಲಿ ಚರಿಸುವ ಪ್ರಾಣವಾದರು ಲಿಂಗಮಯ
ವಾದುದರಿಂದ ಪ್ರಾಣಗಳು ಈ ಶರೀರದಿಂದ ಚಲಿಸಿದರು ತನಗೆ ಅಂಜಿ
ಯು ಇಲ್ಲ. ತತ್ವಸಾಕ್ಷಾತ್ಕಾರದಿಂದ ಕೃತಕೃತ್ಯನಾಗಿರುವುದರಿಂ
ಇಹಜನ್ಮ ಸಾಧ್ಯವಾಗುವುದಿಲ್ಲ. ಕರ್ಮಪಾಶವು ದಗ್ಧವಾದುದರಿಂ
ಮುಂದಣ ಜನ್ಮದ ಭಯವಿಲ್ಲ. ಅದರಿಂದ ಪ್ರಾಣದಲ್ಲಿ ನಿರ್ಭಯವು
ಸಾಮಾನ್ಯರಾದ ಪ್ರಾಕೃತರು ಒಂದು ವೇಳೆ ಧನಾದಿಗಳಲ್ಲಿ ನಿರಾಶೆಯ
ನ್ನು ತೋರ್ಪಡಿಸಿದರೂ ಅನಾಯಾಸದಿಂದ ಅವುಗಳ ಪ್ರಾಪ್ತಿಯಾದ
ಕೈನೀಡಲಿಕ್ಕೆ ಸಿದ್ಧರಿರುವರು. ಧನದಲ್ಲಿ ನಿರಾಶೆಯೂ ಪ್ರಾಣದಲ್ಲಿ
ನಿರ್ಭಯವೂ ಎಂಬಿವೆರಡು ಶಿವಶರಣರಿಗಲ್ಲದೆ ಉಳಿದವರಿಗೆ ಸಾಧಿಸಲಾ
ರವು, ನಿರಾಶಾನಿರ್ಭಯುಗಳೆ ಆನಂದವು. ಏಕೆಂದರೆ ದುಃಖವೆಂಬುದು
ಆಶೆ ಮತ್ತು ಭಯುಗಳಿಂದ ಬೇರೆಯಾಗಿಲ್ಲ. ನಿರ್ಮಲಾನಂದಾವಿರ್ಭಾ
ವವೇ ಶರಣ ಸ್ಥಳದ ಮೆಟ್ಟು.

ಐಕ್ಯ:— "ಶಿವಜೀವೋಭಯಭ್ರಾಂತಿರಹಿತಶ್ಚೈಕ್ಯ ಉಚ್ಯತೇ"
॥ಸೂ॥ ಶಿವಜೀವಚೈತನ್ಯಗಳು ಬೇರೆಯಲ್ಲ. ಒಂದೆಯಾಗಿವೆ ಎಂ
ಸಮ್ಯಗ್ಜ್ಞಾನದಿಂದೆ ಶಿವಜೀವ ಭ್ರಾಂತಿಯನ್ನು ನೀಗಿದಾತನೆ ಐಕ್ಯನು
ಈ ವಿಶ್ವವೆಂಬ ಜಡದೃಶ್ಯವರ್ಗವು ತನ್ನಿಂದ ತಾನೆ ಸಿದ್ಧವಾಗದು
ಅದಕ್ಕೆ ಚೇತನ ವಸ್ತುವಿನ ಅಪೇಕ್ಷೆಯುಂಟು. ಈ ದೇಹವಾದ
ತೋರಲಿಕ್ಕೆ ಆತ್ಮಸಿದ್ಧಿಯು ಬೇಕು. ಆತ್ಮನಿರದೆ ದೇಹಾದಿಗಳು ತೋ
ಲಾರವು. ದೇಹಾದಿಗಳಲ್ಲಿ "ತಾನು" ಎಂಬ ಆತ್ಮಚೈತನ್ಯವು ವ್ಯಾ
ಪಿಸಿ ತೋರುತ್ತಿರುವಂತೆ ವಿಶ್ವರೂಪ ದೃಶ್ಯದಲ್ಲಿ ಸ್ಫುರಣ ಚೈತನ್ಯವ
ತೋರುತ್ತಿರುವುದು. ಈ ಎರಡು ಚೈತನ್ಯಗಳಲ್ಲಿ ಭೇದಭಾವವು ಇ

ವತನಕವೆ ಶಿವಜೀವಭೇದಭ್ರಾಂತಿಯು ಶರಣಸ್ಥಲದ ಆನಂದವಶದಿಂದ ವಿಶ್ವದೃಶ್ಯವೂ ದೇಹಕರಣಾದಿ ದೃಶ್ಯಾನುಭವ ಸಾಮಗ್ರಿಯೂ ನಷ್ಟವಾಗಿ ಅಖಂಡ ಚೈತನ್ಯವೊಂದೇ ತೋರಹತ್ತಲು ಅದೇ ಲಿಂಗಾಂಗ ಸಾಮರಸ್ಯರೂಪವಾದ ಐಕ್ಯ ಸ್ಥಳವು. ಇದೇ ಐಕ್ಯ ಸ್ಥಳದ ಅನುಭವ ಸೂತ್ರವು ನಾಮ ಬಸವಣ್ಣನ ವಚನ:—ಮೂರರಾಪ್ಯಾಯನ ವೈದು ಬಿಟ್ಟವ ನಿಂಬುಗೊಂಡುದ ಕಟಕಟಾ ಮಾಡಿ ಕೆಟ್ಟರು ಮಾಡ ಕೆಟ್ಟರು ನೀಡದೆ ಕೆಟ್ಟರು ನೀಡಿ ಕೆಟ್ಟರು ಕೂಡಲ ಸಂಗಮದೇವನ ಬಯಲಸಮಾಧಿಯಲಿಕ್ಕದೆ ಕೆಟ್ಟರು, ಬ. ವ. "ತಸ್ಮೈ ಉಪಸಂಹರ್ತ್ರೇ ಮಹಾಗ್ರಾಸಾಯ ವೈನಮ:" "ಯ ಇಮಾವಿಶ್ವಾ ಭುವನಾನಿ ಜುಹ್ವತ್" ಋ. ಸಂ. ೮-೩-೧೬. ಸರ್ವವನ್ನೂ ಉಪಸಂಹರಿಸುವ ಮಹಾಗ್ರಾಸ [ ದೊಡ್ಡ ತುತ್ತಿನ ] ನಿಗೆ ನಮಸ್ಕಾರವು, ಆವಾತನು ಇವನ್ನೆಲ್ಲ ಭುವನಂಗಳನ್ನು ತನ್ನಲ್ಲಿ ಹೋಮವನ್ನಾಗಿಸಿದನೊ "ಯಸ್ಯಬ್ರಹ್ಮ ಕ್ಷತ್ರಂಚ ಉಭೇಭವತ ಓದನ: ಮೃತ್ಯುರ್ಯಸ್ಯೋಪಸೇಚನಂಕ ಇತ್ಥಾ ವೇದಯತ್ರಸ:" ಕಠವಲ್ಲೀ ೧—೨—೨೫ ಆವಾತನಿಗೆ ಬ್ರಹ್ಮ ಕ್ಷತ್ರಂಗಳೆರಡೂ ಓದನವು ಅಂದರೆ ಭುಂಜಿಸತಕ್ಕ ಅನ್ನವಾಗಿಹೆಯೆ ಹಾಗು ಮೃತ್ಯುವು ಅನ್ನದೊಡನೆಕಲಿಸಿದ ತುಪ್ಪದಂತಾಗಿದೆಯೊ ಅಂತಹ ಪರಶಿವನು ಎಲ್ಲಿರುವನೆಂಬುದನ್ನು ದುರ್ಗುಣಂಗಳನ್ನು ನಿರಾಕರಿಸಿದಾತನೆಂತು ತಿಳಿಯುವನೊ ಅಂತು ಮತ್ತೊಬ್ಬನು ತಿಳಿಯಲಾರನು. ಎಂಬೀಮೊದಲಾದ ಶೃತಿಗಳಿಂದ ಪರಶಿವನು ಈ ಜಗತ್ತನ್ನೆಲ್ಲ ತನ್ನ ಸ್ವರೂಪದಲ್ಲಡಗಿಸಿ ಶುದ್ಧ ಸ್ಫುರಣಶಕ್ತಿಯೊಡಗೂಡಿರುವನೆಂದು ಸ್ಪಷ್ಟವಾಗುತ್ತದೆ. ಆದರೆ ಈರೀತಿಯಲ್ಲಿ ಪರಮಾತ್ಮನು ಸ್ಫುರಣಾವಶಿಷ್ಟನಾಗುವುದು ಅನುಭವಕ್ಕೆ ಬರಲು ಇಷ್ಟಪ್ರಾಣಭಾವಲಿಂಗಗಳಸ್ವರೂಪ ನಿಲುಕಡೆಯು ತಿಳಿಯಬೇಕು. ಅವುಗಳಿಗೆ ರೂಪ ರುಚಿ ತೃಪ್ತಿಗಳನ್ನರ್ಪಿಸಿ ಪರಶಿವಸ್ವರೂಪವಾಗುಳಿಯಬೇಕು. ಅದೇ ಐಕ್ಯನಿರವು. ಇದನ್ನೆ ಮೇಲುದಾಹರಿಸಿದ ವಚನವುತಿಳುಹುತ್ತದೆ. ನೋಡು—ಇಷ್ಟಪ್ರಾಣಭಾವವೆಂಬ ಮೂರುಲಿಂಗಗಳ ಆಪ್ಯಾಯನವು ಗ್ರಾಸವು ಆ ಬಿಟ್ಟಗಳಾ

ದುವು. ಬೆಟ್ಟಗಳಂತೆ ಸಂಸಾರಕಾನನಕ್ಕೆ ಅಧಿಶ್ರಯವಾದ ಭೂತಪಂಚಕ, ಕರ್ಮೇಂದ್ರಿಯಪಂಚಕ, ಜ್ಞಾನೇಂದ್ರಿಯಪಂಚಕ, ಅಂತಃಕರಣಪಂಚಕ, ಅವಿದ್ಯಾಸ್ಮಿತಾರಾಗದ್ವೇಷಾಭಿನಿವೇಶವೆಂಬ ಅವಿದ್ಯಾಪಂಚಕವೆಂಬೀ ಐದು ಬೆಟ್ಟಗಳು ಮೂರು ಲಿಂಗಗಳಿಗೆ ಗ್ರಾಸವಾದುವು. ಹೇಗೆಂದರೆ ರೂಪ ಪ್ರಸಾದವೆಂದರೆ ಸ್ಥೂಲ ಪದಾರ್ಥಗಳ ಶುದ್ಧಿಯಿಂದ ಭೂತಪಂಚಕಗಳು, ರುಚಿಪ್ರಸಾದವೆಂದರೆ ಶುದ್ಧ ದ್ರವ್ಯಗಳಲ್ಲಿ ಅಹಂಮಮತಗಳಿಲ್ಲದಿರುವುದರಿಂದ ಕರ್ಮೇಂದ್ರಿಯ ಜ್ಞಾನೇಂದ್ರಿಯ ಅಂತಃಕರಣಗಳು. ತೃಪ್ತಿಪ್ರಸಾದದಿಂದ ಅಂದರೆ ಶುದ್ಧ ದ್ರವ್ಯಗಳನ್ನು ಅಹಂಮಮತೆಗಳಿಲ್ಲದೆ ಶಿವಪ್ರಸಾದವೆಂದು ಭೋಗಿಸುವುದರಿಂದ ಅವಿದ್ಯಾ ಪಂಚಕವು ಬಂಧಕವಾಗದೆ ಶಿವಸ್ವರೂಪಾನುಭವವು ನಿರಾತಂಕವಾಗುವುದರಿಂದ ಈ ಐದು ಬೆಟ್ಟಗಳು ಮೂರುಲಿಂಗಗಳಿಗೆ ಆಪ್ಯಾಯನವಾಗಿ ಐಕ್ಯನು ನಿರಾವರಣ ಸುಖಾನುಭವವನ್ನು ಹೊಂದುವನು. ಈ ಹದವು ತಿಳಿಯದೆ ಭೇದ ಬುದ್ಧಿಯಿಂದ ಲಿಂಗ ಪೂಜೆಯನ್ನು ಮಾಡಿ ಅವಿದ್ಯಾ ಗ್ರಂಥಿಯು ನಾಶವಾಗದೆ ಫಲಪದವಿಗಳ ಅನುಭವದಿಂದ ಹಲವರು ಕೆಟ್ಟರು. ಇನ್ನುಳಿದವರು ಶಿವಭಕ್ತಿಯನ್ನು ಮಾಡದೆ ಕೆಟ್ಟರು. ಭೇದಬುದ್ಧಿಯಿಂದ ಗುರುಲಿಂಗಜಂಗಮಕ್ಕೆ ನೀಡಿ ನಶ್ವರ ಸುಖಂಗಳಂ ಹೊಂದಿ ಹಲವರು ಕೆಟ್ಟರು. ಗುರುಲಿಂಗಜಂಗಮಕ್ಕೆ ತನು ಕುಲಾಭಿಮಾನವನ್ನರ್ಪಿಸದೆಯೆ ವಿರಕ್ತರೆನಿಸಿದರು ಜಾತಿಕುಲಾಭಿಮಾನದಿಂದ ಸಂಸಾರಬಂಧನಲ್ಲಿ ಸೆರೆಯಾಗಿ ಇನ್ನುಳಿದವರು ಕೆಟ್ಟರು. ಸಕಲ ತತ್ವತಾತ್ವಿಕಂಗಳೂ ದಾತೃವೆಂಬ ಭಕ್ತನೂ ಪ್ರತಿಗೃಹೀತೃ (ದಾನ ಸ್ವೀಕರಿಸುವಾತ) ವೆಂಬ ಜಂಗಮನೂ ಶಿವಸ್ವರೂಪವೆ ಎಂಬ ನಾನೀನೆಂಬ ತೊಡರಿಲ್ಲದ ಬಯಲ ಸಮಾಧಿಯಲ್ಲಿ ಭೇದಭಾವವನ್ನು ಅಡಗಿಸದೆ ಲಿಂಗಾಂಗಸಾಮರಸ್ಯೈಕ್ಯರಾದರು.

## ಲಿಂಗಸ್ಥಳಗಳು.

ಆಚಾರ:—"ಆಚಾರಲಿಂಗಂ ತತ್ಪ್ರೋಕ್ತಂ ಶಿವಲಾಂಛನ ಸಂಯುತಮ್" ॥೩೯॥ ಶಿವಧರ್ಮಕ್ಕೆ ಮೊದಲನೆಯ ಮೆಟ್ಟು ಆಚಾರವು. ಆಚಾರ ಸ್ವರೂಪವೆಂದರೆ ಶಿವಲಾಂಛನಗಳಿಂದ ಸುಶೋಭಿತನಾಗಿರುವ

ದು. ಬಸವನ ವಚನವನ್ನು ನೋಡು—"ಅಷ್ಟವಿಭೂತಿ ಇಲ್ಲದವನ ಮುಖಹೊಲ್ಲ, ನೋಡಲಾಗದು. ಲಿಂಗದೇವನಿಲ್ಲದ ಠಾವ ನೆರೆವಿಂಚು, ಹೋಗಲಾಗದು. ದೇವಭಕ್ತನಿಲ್ಲದ ಊರುಸಿನೆ ಹಾಳು, ಕೂಡಲಸಂಗಮದೇವ" "ಅಷ್ಟತ್ರಿಪುಂಡ್ರದ ಮಣಿ ಮುಕುಟವೇಷದ ಶರಣರ ಕಂಡರೆ ನಂಬುವುದೆನ್ನ ಮನವು, ನಚ್ಚುವುದೆನ್ನ ಮನವು ಸಂದೇಹವಿಲ್ಲವೈ, ವಿಭೂತಿಯಿಲ್ಲದವರ ನಂಬೆ ಕೂಡಲ ಸಂಗಮದೇವ" ‖ ಈ ವಚನಗಳಿಂದ ಧರ್ಮರೂಪನಾದ ಬಸವನ ಅಂತಃಕರಣವು ಶಿವಲಾಂಛನದಲ್ಲಿ ಎಷ್ಟು ಪ್ರೇಮಪೂರಿತವಿತ್ತೆಂಬುದು ಒಡೆದು ಕಾಣುತ್ತದೆ.

ಗುರು :— "ಆಚಾರಲಿಂಗಸಂಬಂಧಿ ಗುರು ಲಿಂಗಮುದಾಹೃತಂ" ‖ಸೂ‖ ಶಿವಲಾಂಛನಗಳೆಂಬ ಆಚಾರಲಿಂಗಕ್ಕೆ ಸಂಬಂಧಿಸಿದುದು ಗುರುಲಿಂಗವು. ಶಿವಲಾಂಛನಗಳ ಸ್ವರೂಪ ರಹಸ್ಯವನ್ನು ಗುರುಮುಖದಿಂದ ತಿಳಿದು ಧರಿಸತಕ್ಕುದು. ಗುರುಮುಖದಿಂದಲ್ಲದೆ ಈ ಶಿವಲಾಂಛನಗಳ ಲಾಭವಾಗದು. ಶಿವನೆ ಗುರುರೂಪದಿಂದ ಮುಮುಕ್ಷುಗಳನ್ನುದ್ಧರಿಸುವನು. ಗುರು ಮಾರ್ಗಾಗತ ಸಂಪ್ರದಾಯವಿಲ್ಲದಿದ್ದರೆ ಧರ್ಮದ ನಿಗೂಢಾರ್ಥಗಳು ತಿಳಿಯಲಾರವು. ಸಾಮಾನ್ಯವಾದ ಲೌಕಿಕ ಜ್ಞಾನಗಳು ಸಹ ಗುರುಮುಖದಿಂದಲ್ಲದೆ ವಿದಿತವಾಗುವುದಿಲ್ಲ. ಅಂದಬಳಿಕ ಅತೀಂದ್ರಿಯವಾದ ಧರ್ಮಜ್ಞಾನವು ಗುರುವಿಲ್ಲದೆ ತಿಳಿಯುವ ಬಗೆ ಆವುದು? ಆಗಮಾರ್ಥರಹಸ್ಯವು ಗುರುಮುಖದಿಂದಲ್ಲದೆ ತಿಳಿಯದೆಂಬಲ್ಲಿ ಬಸವನ ಮಾರ್ಮಿಕ ವಚನವು:— "ಮಡಿಕೆಯ ಮಾಡುವರೆ ಮಣ್ಣೆ ಮೊದಲು, ತೊಡಗೆಯ ಮಾಡುವರೆ ಹೊನ್ನೆ ಮೊದಲು, ಶಿವಪದವ ನೋಡುವರೆ ಗುರುಪದವೆ ಮೊದಲು, ಕೂಡಲ ಸಂಗಮದೇವರನರಿವಡೆ ಶರಣರ ಸಂಗವೆ ಮೊದಲು ‖ ನೋಡಿ ನೋಡಿ ಮಾಡುವ ನೇಮ ಸಲ್ಲವು ಸಲ್ಲವು. ತನ್ನ ಉದ್ದೇಶ ಮನವುದ್ದೇಶ ಮಾಡುವ ನೇಮ ಸಲ್ಲವು ಸಲ್ಲವು. ಗುರುಪಥವ ಮೀರಿಮಾಡುವ ನೇಮ ಸಲ್ಲವು ಸಲ್ಲವು. ಕೂಡಲಸಂಗಮದೇವಯ್ಯ ನಿತ್ಯನೆಂದೆನಿಸಯ್ಯ ಗುರುವಚನ ನೇಮವೆಂದೆನಿಸಯ್ಯ ತಲೆಯಿಲ್ಲದ ಅಟ್ಟೆಗೆ ಪಟ್ಟವ ಕಟ್ಟುವ ಉಭಯ ಭ್ರಷ್ಟರ ಮೆಚ್ಚುವನೆ ನಂಪು

ಕೂಡಲಸಂಗಮದೇವ" ಮುಂಜಿವಿಲ್ಲದೆ ಮದುವೆಯನ್ನು ಮಾಡಲಾಗದು ಗುರುವಚನವಿಲ್ಲದೆ ಶಿವಜ್ಞಾನವಾಗದು. ಆವುದಾದರೊಂದು ನೇಮವು ಕೇವಲ ತನ್ನ ಮನಸಿಗೆ ಬಂದುದರಿಂದ ಅದನ್ನು ಮಾಡುವೆನೆಂದು ಮಾಡ ಹೊಲಬುದಪ್ಪಿ ಮುಂಗತಿಗಾಣರು. ಸರ್ವಜ್ಞಾನ ತಂತುಗಳಿಗೆ ಶಿರಸ ಆಧಾರವು ಶಿರಸಿನಲ್ಲಿಯ ಜ್ಞಾನತಂತುಗಳ ವ್ಯಾಪಾರದಿಂದಲೆ, ಶರೀರದ ಸಕಲವ್ಯಾಪಾರಗಳು ಅದರಂತೆಯೆ ಗುರೂಪದೇಶದಿಂದಲೆ ಸಕಲ ಕ್ರಿಯಾನುಷ್ಠಾನವು. ಆದುದರಿಂದ ಈ ಶಿವಾಚಾರಕ್ಕೆ ಗುರುಮಾರ್ಗವೇ ಆದಿಯು.

ಶಿವ:—"ಗುರುಲಿಂಗೋಪದಿಷ್ಟಂ ಯಚ್ಛಿವಲಿಂಗಂ ತದೀರಿತಂ" ॥ಸೂ॥ ಗುರುವು ಉಪದೇಶಿಸಿ ಕುರುಹುದೋರಿಸಿದುದೆ ಶಿವಲಿಂಗವು. ಗುರುವು ಮಂತ್ರೋಪದೇಶಂಗೈದು ಲಿಂಗಧಾರಣಂಗೈಯಲು ಆ ಶಿವಲಿಂಗವು ಶಿಷ್ಯನ ಅಂಗದಲ್ಲಿ ಸಂಗತವಾಗುವುದು. ಅದರಿಂದಲೆ ಶಿವಾಚಾರದ ಹೊಲಬು. "ಪಾತಕ ಶತಕೋಟಿಗಳ ನೊರೆದುಹಾಕಲು ಸಾಲದೆ ಒಂದು ಶಿವನಾಮ. ಕೂಡಲಸಂಗಮದೇವ ನಿಂಮ ಉಂಡಿಗಿಯ ಪಶುವ ಮಾಡಿದಿರಾಗಿ" ಎಲೈ ಸದ್ಗುರುನಾಥನೆ ನೀನು ನನ್ನನ್ನು ನಿಂಮ ಮುದ್ರೆಯ ಪಶುವನ್ನು ಮಾಡಿದಿರಲ್ಲ, ಇನ್ನು ನನ್ನ ಪಾತಕಗಳು ಒಂದು ಶಿವನಾಮ ಸ್ಮರಣದಿಂದ ಉರುಳಿ ಬೀಳುವುವು. ಅಂದರೆ ಸದ್ಗುರುವು ತನಗೆ ಲಿಂಗ ಸಂಬಂಧಗೆಯ್ದುದರಿಂದ ಉಂಡಿಗೆಯ ಪಶುವಾದೆನು. ಲಿಂಗಮುದ್ರಾಂಕಿತ ಪಶುವು ಆವರೀತಿಯಲ್ಲಿ ಸರ್ವರಿಗೂ ಆದರಣೀಯವಾಗುವುದೊ ಅದರಂತೆಯೆ ಗುರುವಿನ ಕರದಿಂದ ಲಿಂಗಧಾರಣವಾಗಲು ಶಿವಶರಣರ ಕೃಪೆಗೆ ಪಾತ್ರವಾದೆನು. ಈ ವಚನದಲ್ಲಿ ಶ್ರೀಬಸವೇಶನು ಸಂಪ್ರದಾಯಸಿದ್ಧನಾದ ಗುರುವಿನ ಕರಜಾತನಾಗುವುದು ಅತ್ಯವಶ್ಯವಾದುದೆಂತಲೂ ಗುರುವೇ ಮುಕ್ತಿಮೂಲವೆಂತಲೂ ತಿಳಿಸಿರುವನು. ಕುಲವಾದಿಗಳು ಕಲ್ಪಿಸಿದ ಗುರುವರ್ಗದಲ್ಲಿ ಎಷ್ಟು ಮಂದಿ ಸಂಪ್ರದಾಯಸಿದ್ಧರಿರುವರು?

ಚರ:—"ಶಿವಲಿಂಗಮುಖಂ ಯತ್ತಚ್ಚರಲಿಂಗ ಮುದಾಹೃತಂ" ॥ ಸೂ ॥ ಶಿವಲಿಂಗದ ಮುಖವಾವುದೊ ಅದೇ ಚರಲಿಂಗವು. ಶಿವಲಿಂಗ

ಮುಖವೇ ಚರಲಿಂಗವೆಂಬುದರ ತಾತ್ಪರ್ಯವೇನು ? ಇಷ್ಟಪ್ರಾಣಭಾವಲಿಂಗಗಳ ಸಂಯೋಗದಿಂದನುಕ್ರಮವಾಗಿ ತನ್ನ ಸ್ಥೂಲ ಸೂಕ್ಷ್ಮಕಾರಣ ಶರೀರಗಳಲ್ಲಿ ಅಡಕವಾಗಿರುವ ಚೇತನಾತ್ಮಕ ಜ್ಞಾನಾತ್ಮಕಾನಂದಾತ್ಮಕ ಶಿವಶಕ್ತಿಗಳು ವಿಕಾಸವಾಗುತ್ತವೆ. ಮಲನಿರೋಧದಿಂದುಂಟಾದ ಅಣುತ್ವವು ಅಥವಾ ಈ ಶಕ್ತಿಗಳ ಸಂಕೋಚವು ಅಳಿದು ಸರ್ವೇಂದ್ರಿಯಗಳಲ್ಲಿಯು ನಿರಾಬಾಧಿತವಾದ ಶಿವಜ್ಞಾನವು ಸ್ಫುರಿಸುತ್ತದೆ. ಹಾಗು ಲಿಂಗಸ್ವರೂಪವೆ ತಾನಲ್ಲದೆ ಬೇರೆಯಲ್ಲವೆಂಬ ಶಿವಸ್ವರೂಪ ವಿಮರ್ಶವು ಉಜ್ವಲಿಸುತ್ತದೆ. ಇಂತಹ ಸ್ಥಿತಿಯಲ್ಲಿ ಇಂದ್ರಿಯಂಗಳೆಲ್ಲ ಲಿಂಗಸ್ವರೂಪವಾಗುತ್ತವೆ. ಆದರಿಂದಲೆ ವೀರಶೈವ ಶಾಸ್ತ್ರಗಳು "ಜಿಹ್ವಾಂಗೇ ಗುರುಲಿಂಗಂ ಸ್ಯಾದಾಚಾರೋ ನಾಸಿಕಾಂಗಕೇ ॥ ಪ್ರಸಾದಲಿಂಗಂ ಶ್ರೋತ್ರಾಂಗೇ ತ್ವಗಂಗೇ ಚರಲಿಂಗಕಂ । ದೃಗಂಗೇ ಶಿವಲಿಂಗಂ ಸ್ಯಾನ್ಮಹಾಲಿಂಗಂ ಹೃದಿಸ್ಥಿತಂ" ॥ಸೂ॥ ಆಚಾರಲಿಂಗವು ನಾಸಿಕಾಂಗದಲ್ಲಿಯೂ ಗುರುಲಿಂಗವು ಜಿಹ್ವೇಂದ್ರಿಯದಲ್ಲಿಯೂ ಶಿವಲಿಂಗವು ನೇತ್ರೇಂದ್ರಿಯದಲ್ಲಿಯೂ ಜಂಗಮಲಿಂಗವು ತ್ವಗಿಂದ್ರಿಯದಲ್ಲಿಯೂ ಪ್ರಸಾದಲಿಂಗವು ಶ್ರವಣೇಂದ್ರಿಯದಲ್ಲಿಯೂ ಮಹಾಲಿಂಗವು ಅಂತಃಕರಣದಲ್ಲಿಯೂ ನೆಲೆಗೊಂಡಿರುವುವೆಂದು ಹೇಳುತ್ತವೆ. ಆದುದರಿಂದ ಇಂತಹ ಶಿವಯೋಗಿ ಎಂಬ ಜಂಗಮನು ಆಯಾ ಇಂದ್ರಿಯಗಳಿಂದ ಉಪಭೋಗಿಸುವ ಪದಾರ್ಥಗಳು ಲಿಂಗಾರ್ಪಿತವೆಯಾಗುತ್ತವೆ. ಲಿಂಗಕ್ಕೆ ಶಿವಯೋಗಿಯುಂಬ ಚರಲಿಂಗವೆ ಅರ್ಥಾತ್ ಜಂಗಮನೆ ಮುಖವು. ಇದನ್ನೇ ಬಸವನು "ಅಗ್ನಿಯಾಧಾರದಲ್ಲಿ ಕಬ್ಬುನ ನೀರುಂಬುದಯ್ಯ ಭೂಮಿಯಾಧಾರದಲ್ಲಿ ವೃಕ್ಷ ನೀರುಂಬುದಯ್ಯ ಜಂಗಮ ತೃಪ್ತಿಯಾದರೆ ಲಿಂಗ ಸಂತೃಪ್ತಿಯಹುದಯ್ಯ ಇದು ಕಾರಣ ಕೂಡಲಸಂಗಮದೇವರಲ್ಲಿ ಜಂಗಮ ವಾಪ್ಯಾಯನವಾದರೆ ಲಿಂಗಸಂತುಷ್ಟಿ" ಎಂಬ ನುಡಿಯಲ್ಲಿ ವ್ಯಕ್ತೀಕರಿಸಿರುವನು. ಒಳಗೆಲ್ಲ ತುಂಬಿದ ಶಿವಚೈತನ್ಯವು ಪಟುವಾಗುವ ತನಕ ಜಡಪ್ರಾಯವಾಗಿರುವುದು. ಚೈತನ್ಯವು ಪಟುವಾಗಲು ಶಿವಾನುಭವವು ಜ್ಞಾನಿಯ ಬುದ್ಧಿಯಲ್ಲಿ ಗೋಚರಿಸುವುದು. ಆದುದರಿಂದ ಭ

ಕ್ತನು ತನ್ನ ಅಂಗದಲ್ಲಿ ಸ್ಥಿರವಾಗಿ ನೆಲೆಗೊಂಡುದರಿಂದ ಸ್ಥಾವರವೆನಿಸುವ ಇಷ್ಟಲಿಂಗದಲ್ಲಿ ಅಡಕವಾದ ಪರಮೇಶ್ವರನಿಗೆ ಸಂತುಷ್ಟಿಗೊಳಿಸಲು ಸ್ವಾತ್ಮಾನುಭವರೂಪ ಅಂತರ್ಜಂಗಮದ ಹಾಗು ಶಿವಯೋಗಿ ಎಂಬ ಕ್ರಿಯಾ ಜಂಗಮದ ಮುಖದಿಂದಲ್ಲದೆ ಬೇರೆ ಮಾರ್ಗವಿಲ್ಲ. ಲಿಂಗವೆಂಬ ಕಬ್ಬುನಕ್ಕೆ ಜಂಗಮವು ಅಗ್ನಿಯ ಒಲಾಗಿರುವನು. ಲಿಂಗವು ವೃಕ್ಷಕ್ಕೆ ಹೋಲಿಕೆಯನ್ನು ಹೊಂದಿದರೆ ಜಂಗಮನು ಭೂಮಿಗೆ ಹೋಲುವನು. ಭಕ್ತನ ಅಂಗದಲ್ಲಿದ್ದರೂ ಆ ಭಕ್ತನ ಸ್ವಾತ್ಮಾನುಭವ ಸ್ಫುರಣದಿಂದಲ್ಲದೆ ಲಿಂಗಕ್ಕೆ ಶಿವಕಳೆಯು ವೇಧಿಸದು. ಭಕ್ತನ ತನುತ್ರಯಗಳಲ್ಲಿಯೂ ವ್ಯಾಪಿಸಿ ಭಕ್ತನ ಇಂದ್ರಿಯತನುಗಳೆಂಬುವವೆಲ್ಲ. ಸ್ವಕೀಯೇಂದ್ರಿಯ ತನುಗಳನ್ನಾಗಿಸದೆ ಲಿಂಗವು ತೃಪ್ತಿಯನ್ನು ಹೊಂದಲಾರದು. ಭಕ್ತಶರೀರಧೃತವಾಗಿ ಭಕ್ತದೇಹಿಕ ದೇಹವಾಗಿಯೆ ಲಿಂಗವು ಅಜಡವೆನಿಸಿದುದರಲಿ ಶಿವನಿಗಿಂತ ಜಂಗಮವಧಿಕವೆಂಬ ಶೈವ ಶಾಸ್ತ್ರೋಕ್ತಿಯು ನಿರೂಪಿತವೆನಿಸಿತು.

ಪ್ರಸಾದ :— "ಚರಲಿಂಗೋಪಲಬ್ಧಂಯತ್ತತ್ಪ್ರಸಾದಾಂಗಮುಚ್ಯತೇ" ॥ ಸೂ ॥ ಚರಲಿಂಗದಿಂದ ಉಪಲಭಿಸಿದುದೆ ಪ್ರಸಾದಲಿಂಗವೆನಿಸುತ್ತದೆ. ಶಿವಾನುಭವಿಯ ಸರ್ವೇಂದ್ರಿಯಂಗಳು ಲಿಂಗಮುಖವಾದುವಷ್ಟೆ. ಅಂತಹ ಇಂದ್ರಿಯುಗಳಿಂದ ಉಪಭೋಗಿಸಲ್ಪಟ್ಟುದೆ ಪ್ರಸಾದವೆನಿಸಿತು. ಸಾಂಸಾರಿಕ ಜೀವರು ದೇಹಕರಣಾದಿಗಳಲ್ಲಿ ನಾನು ನನ್ನದೆಂಬ ಬುದ್ಧಿಯುಳ್ಳವರಾಗಿ ಆಯಾ ವಿಷಯಗಳನ್ನು ಉಪಭೋಗಿಸುವರು. ಸರ್ವಪದಾರ್ಥಗಳು ಶಿವಸತ್ತೆಯಿಂದ ವ್ಯಾಪ್ತವಾಗಿರುವುದರಿಂದ ಯಥಾರ್ಥವಾಗಿ ಶಿವಮಯವಾಗಿರುವುವಾದರು ಹಲವು ತೋರಿಕೆಗೆ ಕಾರಣವಾದ ಮಾಯೆಯಿಂದ ಭಿನ್ನ ಭಿನ್ನವಾದ ನಾಮರೂಪಗಳಿಗೆ ಆಧಾರವಾಗಿರುತ್ತವೆ. ಈ ನಾಮರೂಪಗಳು ವಸ್ತುತಃ ವಿಚಾರಿಸಲು ಪರಶಿವ ಸತ್ತಾತ್ಮಕವಾದ ಶಿವಶಕ್ತಿಯಲ್ಲಿ ಮಿಥ್ಯೆಯಾದರು, ಜೀವರುಗಳನ್ನು ಮೋಹಿಸುತ್ತವೆ. ಹಾಗೂ ವಿಚಾರ ಮುಖೇಣ ದುಃಖಹೇತುಗಳೆಂದು ತೋರಿ ತ್ಯಾಜ್ಯವಾಗಿರುವುದರಿಂದ ಉಚ್ಛಿಷ್ಟವೆನಿಸುತ್ತವೆ. ಆದರೆ ಶಿವಯೋಗಿಯು

ತನ್ನ ನಿಜಸ್ವರೂಪವನ್ನರಿತವನಾಗಿರುವುದರಿಂದ ದೇಹೇಂದ್ರಿಯಗಳಲ್ಲಿ ಆತ್ಮಮತಿಯನ್ನಿಡದೆ ಅಖಂಡಾತ್ಮಕ ಮೋಕ್ಷಜ್ಞಾನಸ್ವರೂಪನಾಗಿರುವನು. "ಅನಂತರೋಽಬಾಹ್ಯಃ ಕೃತ್ಸ್ನಃ ಪ್ರಜ್ಞಾನಘನಏವ" ಬೃ. ೪ ೫ ೧೩ "ಅಥಯೋವೇದೇದಂ ಜಿಘ್ರಾಣೀತಿಸಆತ್ಮಾ" ಎಂಬೀ ಮುಂತಾದ ಶ್ರುತಿಗಳು ಈ ಅರ್ಥದಲ್ಲಿ ಪ್ರಮಾಣವಾಗಿವೆ. ಅಂತಹಸ್ಥಿತಿಯಲ್ಲಿ ಏನು ನೋಡಿದುದೆಲ್ಲ ಲಿಂಗವು. ಮೂಸಿದುದೆಲ್ಲ ಲಿಂಗವು. ರುಚಿಸಿದುದೆಲ್ಲ ಲಿಂಗವು. ಕೇಳಿದುದೆಲ್ಲ ಲಿಂಗವು. ಮುಟ್ಟಿದುದೆಲ್ಲ ಲಿಂಗವು ಆಗಿ ನಿರ್ಮಲವಾದ ಪ್ರಸಾದವೆನಿಸುತ್ತದೆ. ಏಕೆಂದರೆ ತ್ಯಾಜ್ಯವಾದ ನಾಮರೂಪಗಳೆಂಬ ಮಾಯಾಂಶಗಳು ಶಿವಯೋಗೀಶ್ವರನ ಜ್ಞಾನದೃಷ್ಟಿಯೆಂಬ ಅಗ್ನಿಯಿಂದ ದಹಿಸಿ ಶುದ್ಧವಾದ ಸದ್ರೂಪಚೈತನ್ಯಾನುಸಂಧಾನವೆಯಾಗಿ ಪ್ರಸಾದವೆ ಉಳುಮೆಯಾಗಿರುತ್ತದೆ. ಶಿವಯೋಗಿಯು ಶಿವದೃಷ್ಟಿಯಿಂದ ಕಂಡ ಪದಾರ್ಥಗಳಿಗೆ ಮುಮುಕ್ಷುಗಳಿಗೆ ಪ್ರಸಾದವೆನಿಸಿದುವು.

ಇದೇ ಅರ್ಥವನ್ನು ಬಸವನ ವಚನವು ಹೇಳುವುದನ್ನು ನೋಡಿರಿ: "ಬಂದುದ ಕೈಕೊಳ್ಳಬಲ್ಲರೆ ಅದು ನೇಮ. ಇದ್ದುದ ವಂಚನೆ ಮಾಡದಿದ್ದರೆ ಅದು ನೇಮ, ನಡೆದು ತಪ್ಪದಿದ್ದರೆ ಅದು ನೇಮ. ನುಡಿದು ಹುಸಿಯದಿದ್ದರೆ ಅದು ನೇಮ. ನಂಮ ಕೂಡಲ ಸಂಗಮನ ಶರಣರು ಬಂದರೆ ಒಡೆಯರಿಗೆ ಒಡೆವೆಯನರ್ಪಿಸುವುದೆ ಅದು ಮುನ್ನ ನೇಮ" ಭ. ೨೩೧ ನಿಜವಾದ ಶಿವ ಪ್ರಸಾದ ಸಿದ್ಧಿಗೆ ಬೇಕಾದ ನಡವಳಿಯು ಈ ವಚನದಲ್ಲಿ ವಿವರವಾಗಿರುತ್ತದೆ. ಧನಪ್ರಾಪ್ತಿಯಲ್ಲಿ ಭಕ್ತನು ನಿರರ್ಥಕವಾದ ಆಯಾಸವನ್ನು ಹೊಂದಲಾಗದು. ಸದಾ ಸಂತೋಷ ವೃತ್ತಿಯುವನಿಗಲ್ಲದೆ ಮನೋ ನಿರ್ಮಲತ್ವವೆಂಬ ಪ್ರಸಾದವು ದೊರಕಲರಿಯದು ಆದುದರಿಂದ ಪ್ರಸಾದವನ್ನು ದೊರಕಿಸಬೇಕೆಂದು ಇಚ್ಛೆಯುಳ್ಳತನು ಧರ್ಮದಿಂದ ಅನಾಯಾಸವಾಗಿ ದೊರಕಿದ ಧನದಲ್ಲಿ ಸಂತುಷ್ಟನಾಗಿರಬೇಕು. ಬಂದ ದುಃಖಗಳನ್ನಾದರು ಶಿವನಸಪ್ಪಣೆಯೆಂದು ತಾಳುವಲ್ಲಿ ಗಟ್ಟಿಗನಾಗಬೇಕು. ಇಂತಹ ಸ್ಥಿತಿಯಲ್ಲಿ ಅಚಲನಾಗಿರುವುದು ನೇಮವು. ಹಾಗಲ್ಲದೆ ಇತರ ನಿಯಮಗಳು ನಿಜವಾದ ನಿಯಮಗಳಲ್ಲ. ಧರ್ಮದಿಂದ ಗ

ಳಿಸಿದ ದ್ರವ್ಯವನ್ನು ಶಿವಾರ್ಥವಾಗಿ ವ್ಯಯಮಾಡುವ ಪ್ರಸಂಗವಿರಲು ನಾಳೆ ನಾನ ಬಾಳುವೆಗೆ ಬೇಕೆಂಬ ಕಳಕಳಿಯಿಂದ ವಂಚಿಸಬಾರದು. ಶಿವಾಚಾರದ ಪಥದಲ್ಲಿ ಇಟ್ಟ ಹೆಜ್ಜೆಯನ್ನು ತೆಗೆಯಬಾರದು. ಒಂದೆ ನುಡಿದ ಬಳಿಕ ಆ ನುಡಿಯನ್ನು ತಪ್ಪಿಸಕೂಡದು. ಹೀಗೆ ಧರ್ಮಬದ್ಧನಾಗಿ ವರ್ತಿಸಿ ದೊರಕಿಸಿದ ದ್ರವ್ಯವು ಶರಣರದೇ ಎಂದು ಭಾವಿಸಿ ಅವರಿಗದನ್ನರ್ಪಿಸಿ ಅವರ ಶೇಷ ಪ್ರಸಾದವನ್ನು ಕೈಕೊಳ್ಳುವುದೆ ಉತ್ಕೃಷ್ಟ ನಿಯಮವಲ್ಲದೆ ಬೇರೆ ನಿಯಮಗಳು ಬಂಧಕಂಗಳಲ್ಲದೆ ಆತ್ಮನ ಬಂಧನಾಶನಕ್ಕಲ್ಲ.

ಮಹಾಲಿಂಗ:—"ಪ್ರಸಾದಗ್ರಾಹಕಂಯತ್ತನ್ಮಹಾಲಿಂಗಮಿತ್ಯಮಾತ್" ಶುದ್ಧ ಶಿವಾಚಾರದಿಂದ ವರ್ತಿಸಿ ವಿಷಯಗಳನ್ನು ಮೇಲೆ ಹೇಳಿದ ರೀತಿಯಲ್ಲಿ ಶುಚಿಭೀಕರಿಸಿ ತನ್ನ ತನುಮನಧನಂಗಳನ್ನು ಗುರುಲಿಂಗಜಂಗಮಾರ್ಪಣಂಗೆಯ್ದು ಶೇಷಪ್ರಸಾದವನ್ನು ಸ್ವೀಕರಿಸಲು ಪ್ರಕಟವಾದ ಸ್ವರೂಪವೆ ಮಹಾಲಿಂಗವು. ಅಂತಃಕರಣದಲ್ಲಿ ದೃಢಾನುಭವಕ್ಕೆ ಬರುವುದರಿಂದ ಹೃದಯ ಸ್ಥಾನದಲ್ಲಿರ್ಪುದು. ಶುದ ಶಿವಲಾಂಛನವೂ ಆ ಶಿವಲಾಂಛನಗಳ ಯಥಾರ್ಥವಾದ ಗುರುಮುಖಾಗತ ಜ್ಞಾನವು ಆ ಜ್ಞಾನದಿಂದುಂಟಾದ ಶಿವಲಿಂಗಧಾರಣವೂ ಆ ಶಿವಲಿಂಗಧಾರಣದಿಂ ಸರ್ವಾಂಗವು ಲಿಂಗಮಯವಾದ ಯೋಗವೂ ಆ ಯೋಗದಿಂದ ಪ್ರಾಪ್ತವಾದ ಮನೋನಿರ್ಮಲತ್ವವೂ ಉಂಟಾಗುವತನಕ ಈ ಲಿಂಗ ಸ್ಥಿತಿಯು ಬಾರದರಿಂದ ಆ ಪಂಚಲಿಂಗಗಳನೊಳಕೊಂಡ ಇದಕ್ಕೆ ಮಹಾಲಿಂಗವೆಂ ಸಂಜ್ಞೆಯುಂಟಾದಿತು—ಇದಕ್ಕೆ ಬಸವ ವಚನವು:—ಸಕ್ಕರೆಯ ಕೊನ ತುಂಬಿ ಹೊರಗೆ ಸವಿದರೆ ರುಚಿಯುಂಟೆ. ತಕ್ಕೈಸಿ ಭುಜತುಂಬಿ ಲಿಂಗಸ್ಪರ್ಶನವಮಾಡಿದೆ. ಅಕಟಕಟಾ ಸಂಸಾರವು ವೃಥಾ ಹೋಯಿತಲ್ಲ ಅದೇ ತರ ಭಕ್ತಿ ಅದೇ ತರ ಯುಕ್ತಿ ಕೂಡಿಕೋ ಕೂಡಲಸಂಗಮದೇವನ ಭಕ್ತಸ್ಥಳ ೫೧. ಲಿಂಗದೇವನನ್ನು ಭೇದಭಾವನೆಯಿಂದ ಕಂಡ ಮಾಡಿದ ಪೂಜೆಯು ವ್ಯರ್ಥವಾದುದು. ಸಕ್ಕರೆಯು ಸವಿಯಾಗಿರುವುದದರು ಪ್ರತ್ಯಕ್ಷವಾಗಿ ನಂಮ ರಸನೇಂದ್ರಿಯಕ್ಕೆ ಸೋಂಕಿ ಆದರೊಡ

ಸಮರಸವಾದುದಲ್ಲದೆ ತನ್ನ ಇನಿದು ತೋರದು. ಸಕ್ಕರೆಯನ್ನು ತುಂಬಿದ ಪಾತ್ರವನ್ನು ನೆಕ್ಕಿದರೆ ಅದರಿಂದ ವ್ಯರ್ಥ ಶ್ರಮವಲ್ಲದೆ ತೃಪ್ತಿಯಾಗದು. ಅದರಂತೆಯೆ ಲಿಂಗದೇವನಿಗೂ ತನಗೂ ಭೇದವಿರುವುದೆಂಬ ಬುದ್ಧಿಯಿಂದ ಬೇಕಾದಷ್ಟು ಭಕ್ತಿಯನ್ನು ಮಾಡಿದರು ಆ ಲಿಂಗಯ್ಯನನ್ನು ಕರಸ್ಥಲದಲಿಟ್ಟು ಪೂಜಿಸಿದರು. ಅಪ್ಪುಗೆಯನ್ನು ಮಾಡಿದರು ತನ್ನ ಜೀವಭಾವವು ಅಳಿಯಲಿಲ್ಲ. ಸಂಸಾರವನ್ನು ಹಿಂಗಲಿಕ್ಕೆ ತಕ್ಕ ಸಾಮರ್ಥ್ಯವನ್ನೀಟು ಮಾಡುವ ಭಕ್ತಿಯು ಇದಲ್ಲ. ಯುಕ್ತಿಯೂ ಅಲ್ಲ. ಆದರೆ ತನ್ನ ಮರವೆಯಿಂದ ಜೀವನಲ್ಲಿ ತುಂಬೆಲ್ಲ ವ್ಯಾಪಿಸಿದ್ದರೂ ಭಿನ್ನವಾಗಿ ಮನೋಭಾವಂಗಳನ್ನು ಜಡಗಳನ್ನಾಗಿಸಿದ ಆ ಲಿಂಗದೇವನ ಶ್ರದ್ಧಾ ಭಕ್ತಿಯಿಂದ ನಂಬಿ ಗುರುದತ್ತವಾಗಿ ಲಿಂಗರೂಪದಿಂದ ಧರಿಸಿ-ನಿಷ್ಠೆಯಿಂದ ಧರಸಿ ಅವಧಾನದಿಂದ ಚಿಂತಿಸಿ ಅನುಭವದಿಂದ ಸಾಕ್ಷಾತ್ಕರಿಸಿ, ಆ ಸಾಕ್ಷಾತ್ಕಾರ ಜನಿತವಾದ ಆನಂದದಿಂದ ಬಾಹ್ಯವನ್ನು ಮರೆತು. ಮರೆತುದನ್ನು ಪುನಃ ಸ್ಮರಿಸದೆ ಆ ಲಿಂಗದೊಡನೆ ನೀನು ನಿನ್ನೊಡನೆ ಲಿಂಗವು ಏಕವಾಗಲು ಹೃದಯದೊಳಗಿನ ಸಂಸಾರ ಗ್ರಂಥಿಯೊಡೆದು. ಭಿದ್ಯತೇ ಹೃದಯ ಗ್ರಂಥಿಃಛಿದ್ಯಂತೇ ಸರ್ವಸಂಶಯಾಃ। ಕ್ಷೀಯಂತೇ ಚಾಸ್ಯಕರ್ಮಾಣಿ ತಸ್ಮಿನ್ದೃಷ್ಟೇಪರಾವರೆ " ಎಂಬ ಶ್ರುತ್ಯನುಸಾರವಾಗಿ. ಸ್ವರ್ಗಾದಿ ಫಲಾಪೇಕ್ಷೆಯಿಂದ ಮಾಡುವ ಕರ್ಮವಳಿದು ಲಿಂಗಚೇಷ್ಟಾರೂಪವಾದ ಶಿವಪೂಜಾದಿ ಕ್ರಿಯೆಗಳಿಂದಲೂ ನಾನು ಶಿವನಹುದೋ ಅಲ್ಲವೋ. ಇಂದ್ರಿಯಾದಿರೂಪನೋಚಿತ್ಪರೂಪನೋ ಎಂಬೀ ಮೊದಲಾದ ಸಂದೇಹ ಸೂತಕಗಳಿಲ್ಲವಾಗಿ ಸಕಲೇಂದ್ರಿಯ ವ್ಯಾಪಕವಾದ ಶಿವರೂಪವೇ ನಾನೆಂಬ ದೃಢಬುದ್ಧಿಯುಂಟಾಗಿ ಈ ದೃಢಬುದ್ಧಿಯ ಬಲದಿಂದ, ಮೊದಲು ಅಂದರೆ ಮರವೆಯಪೂರ್ವಾವಸ್ಥೆಯಲ್ಲಿ ನಾನು ಸಂಕುಚಿತನು. ಆತನು ಪರಿಪೂರ್ಣನು ನಾನು ಕಿಂಚಿಜ್ಞನು ಆತನು ಸರ್ವಜ್ಞನು ಎಂಬ ಭೇದ ಭಾವದಿಂದ ನಾನು ಶಿವನಲ್ಲ ದೇಹಾದಿಯು ದೇಹಾದಿಯು ನನಗನ್ಯವಾದುದಲ್ಲ ನಾನೆಯೆ ಎಂಬ ಹೃದಯ ಗ್ರಂಥಿಯೊಡೆದು, ಭೇದಸ್ಥಿತಿಯಲ್ಲಿ ತೋರಿದ ಮಾಯಾದಿತತ್ವಗಳ ಮತ್ತು

ಭುವನಾದಿ ತಾತ್ವಿಕಂಗಳ ಉಪಾಧಿಯಳಿದುದರಿಂದ ಶಿವನೆ ತಾನಾಗಿ ತಾನೆ ಶಿವನಾಗಿ ಪರಮಾತ್ಮನನ್ನು ಕೂಡುವುದೆ ನಿಜವಾದ ಭಕ್ತಿ ಪ್ರಾಮಾಣಿಕವಾದಯುಕ್ತಿ. ಇದೆ ಲಿಂಗಾಂಗ ಸಾಮರಸ್ಯರೂಪ ಮಹಾಲಿಂಗಪದ ಪ್ರಾಪ್ತಿ.

ಇದರಂತೆಯೆ ಪಿಂಡಾದಿ ಸಹಭೋಜನಾಂತ ನಾಲ್ವತ್ತುನಾಲ್ಕು ಅಂಗಸ್ಥಲಗಳನ್ನೂ ದೀಕ್ಷಾಗುರ್ವಾದಿ ಜ್ಞಾನಶೂನ್ಯಾಂತಮಾದ ಐವತ್ತೇಳು ಲಿಂಗಸ್ಥಳಗಳನ್ನು ಬಸವವಚನ ಶಾಸ್ತ್ರದಲ್ಲಿ ಸರಸವಾಗಿ ತೋರಿಸಬಹುದು. ಆದರೆ ಗ್ರಂಥವಿಸ್ತರ ಭಯದಿಂದ ಆರು ಅಂಗಸ್ಥಳಗಳನ್ನು ಆರು ಲಿಂಗಸ್ಥಳಗಳನ್ನೂ ನಿರ್ದೇಶಿಸಿ ಈ ಸಂದರ್ಭವನ್ನು ಮುಗಿಸಿದನು. ಇದರ ಮೇಲಿಂದ ಶ್ರೀಬಸವೇಶ ವಚನಗಳಲ್ಲಿ ಶಿವಾಗಮ ಪ್ರತಿಪಾದ್ಯಮಾದ ವೀರಶೈವ ವಿಷಯವೆ ವಿವರವಾಗಿರುವುದು ತಿಳಿದು ಬರುತ್ತಿದೆ. ಆದುದರಿಂದ ಇಂತಹ ವಚನ ಸಂದರ್ಭವನ್ನು ರಚಿಸಿದ ಮಹಾಪುರುಷನು ನಂದೀಶ್ವರನಲ್ಲದೆ ಬೇರೆ ಇರಲಾರನು. ನಂದೀಶ್ವರನೆ ಮಾದಲಾಂಬೆಯ ಪುಣ್ಯಪ್ರಭಾವದಿಂದಲು ವೀರಶೈವ ಸಮಾಜದ ಭಾಗ್ಯಮಹೋದಯದಿಂದಲು ಆಕೆಯ ಸುತನಾಗಿ ಅವತರಿಸಿದನು.

ಬಸವನು ನಂದೀಶನ ಅವತಾರವಾಗಿದ್ದರೆ ಪ್ರಸಿದ್ಧವಾದ ನಂದೀಶನೆಂಬ ನಾಮದಿಂದಲ್ಲದೆ ಅಪ್ರಸಿದ್ಧವಾದ ಬಸವನೆಂಬ ನಾಮದಿಂದೇಕೆ ಅವತರಿಸಿದನೆಂದು ಕೇಳುತ್ತಾರೆ. " ವಿಷ್ಣೋರ್ನುಕಂ ವೀರ್ಯಾಣಿ ಪ್ರವೋಚಂ ಯಃ ಪಾರ್ಥಿವಾನಿ ವಿಮಮೇರಜಾಂಸಿ ! ಯೋಅಸ್ಕಭಾಯದುತ್ತರಂ ಸಧಸ್ಥಂ ವಿಚಕ್ರಮಾಣಸ್ತ್ರೇಧೋರುಗಾಯಃ " ॥ ಋ.೧-೧೫೪-೧. ಎಂಬ ಸೂಕ್ತಗಳಲ್ಲಿ ಪ್ರಸಿದ್ಧವಾದ ವಿಷ್ಣುವೆಂಬಭಿಧಾನದಿಂದಲ್ಲದೆ ರಾಮಾಭಿಧಾನದಿಂದ ವಿಷ್ಣುವೇಕವತರಿಸಿದನು ಎಂಬ ಪ್ರಶ್ನದಂತೆಯೆ ಇದುಂಟು. ರಾಮಾಭಿಧಾನವು ಪರಶಿವನಿಗೆ ರಮಂತೇ ಅಸ್ಮಿನ್ಯೋಗಿನಃ ಎಂಬುಪಪತ್ತಿಯಿಂದ ಗೂಢಸಂಜ್ಞೆಯಾಗಿದ್ದು ತದ್ಭಕ್ತಿಯಿಂದ ವಿಷ್ಣುವಿನ ಅವತಾರವು ರಾಮಾಭಿಧಾನವನ್ನು ಹೊಂದಿತೆಂದರೆ, ಬಸವನ ನಾಮವು ಗುರುಲಿಂಗ ಜಂಗಮಗಳ್ಗ ಇಷ್ಟಪ್ರಾಣಭಾವಗಳ ವಾಚಕ

ವಾಗುವಂತೆ ನಂದೀಶ ಶಬ್ದವು ಆಗುವಂತಿರದರಿಂದ ವೀರಶೈವ ಅಥವಾ ಲಿಂಗಾಯತ ಧರ್ಮದ ಉದ್ಧಾರಕ್ಕಾಗಿ ಅವತರಿಸಿದ ಶಿಶುವು ಬಸವನೆಂಬ ಅಭಿಧಾನವನ್ನು ಹೊಂದಿತು. “ಬಕಾರೋ ಗುರುರೂಪಂಚ ಸಕಾರೋ ಲಿಂಗಮೇವಚ ವಕಾರಶ್ಚರರೂಪಂಚ ತ್ರಿವಿಧಂ ಬಸವಾಹ್ವಯಂ” ಎಂದು ಮೊದಲಾಗಿ ಅನಾದಿ ವೀರಶೈವ ಸಾರಸಂಗ್ರಹಾದಿಗಳು ಕೊಂಡಾಡಿರುವರು. ಈಗಲೆ ಇದರ ಉಪಪತ್ತಿಯನ್ನು ನಾನು ನಿರುಕ್ತ ವ್ಯಾಕರಣಕೋಶಾದಿಗಳ ಪ್ರಮಾಣದಿಂದ ಮಾಡಲು ಯತ್ನಿಸುವೆನು.

ಈ ಶಬ್ದವ್ಯುತ್ಪತ್ತಿಯು ತಿಳಿಯಲು ನಿರುಕ್ತ ಶಾಸ್ತ್ರದ ಕೆಲವು ನಿಯಮಗಳನ್ನು ವಾಚಕರಿಗೆ ಅರುಹುವುದು ಅತ್ಯಾವಶ್ಯಕವು. ಅವು- (೧) ಆವುದೊಂದು ಶಬ್ದವನ್ನು ವ್ಯುತ್ಪಾದಿಸುವ ಮೊದಲು ಲೋಕದಲ್ಲಿ ಬಲ್ಲವರು ಆ ಶಬ್ದದ ಅರ್ಥವನ್ನೇನು ತಿಳಿಯುವರು ಎಂಬುದನ್ನು ಗ್ರಹಿಸಲಿಕ್ಕಬೇಕು. ಲೋಕದಲ್ಲಿದ್ದ ಅರ್ಥಾನುಗುಣದಿಂದ ವ್ಯುತ್ಪತ್ತಿಯನ್ನು ಕಂಡುಹಿಡಿಯಬೇಕಲ್ಲದೆ ಅರ್ಥವನ್ನು ತಿಳುಕೊಳ್ಳದೆ ವ್ಯುತ್ಪತ್ತಿಯನ್ನು ಕಲ್ಪಿಸಕೂಡದು. (೨) ಅರ್ಥವನ್ನು ನಿಶ್ಚಯಿಸಿದಬಳಿಕ ಶಬ್ದವನ್ನು ಅವಯವಶಃ ಪರೀಕ್ಷಿಸಬೇಕು. ಅದರಲ್ಲಿ ಧಾತುವಾವುದು ಪ್ರತ್ಯಯವಾವುದು, ಈ ಧಾತುಪ್ರತ್ಯಯಗಳು ಏನು ಅರ್ಥವನ್ನುಳ್ಳವು ಎಂದು ನೋಡಬೇಕು. ಶಬ್ದಾರ್ಥವನ್ನು ಧಾತುಪ್ರತ್ಯಯಗಳ ಅರ್ಥದಿಂದಲೆ ಹೇಳಲಿಕ್ಕೆ ಬರುವಂತಿದ್ದರೆ ಅದರಂತೆಯೆ ಹೇಳಬೇಕು. ಇಂತಹ ಶಬ್ದಗಳು “ಹಾರಕ, ಕಾರಕ” ಮುಂತಾದುವು. ಹಾರಕ ಶಬ್ದದಲ್ಲಿ ಹೃ=ಒಯ್ಯು ಎಂಬ ಧಾತುವೂ ಅಕ=ಕರ್ತೃ ಎಂಬ ಪ್ರತ್ಯಯವೂ ಉಂಟು. ಲೋಕದಲ್ಲಿ ಹಾರಕನೆಂದರೆ ಒಯ್ಯುವವನೆನ್ನುವರು. ಇದರಂತೆಯೆ ಕಾರಕ ಶಬ್ದದಲ್ಲಿ ಕೃ=ಮಾಡು, ಅಕ=ಕರ್ತೃ ಎಂಬ ಧಾತುಪ್ರತ್ಯಯಗಳುಂಟು. ಲೋಕದಲ್ಲಿ ಕಾರಕನೆಂದರೆ ಮಾಡುವನೆನ್ನುವರು. ಆದುದರಿಂದ ‘ಹಾರಕ “ಕಾರಕ” ಮುಂತಾದ ಶಬ್ದಗಳನ್ನು ಸುಲಭವಾಗಿ ಪ್ರಕೃತಿ ಪ್ರತ್ಯಗಳ ಅರ್ಥಕ್ಕನುಸರಿಸಿ ನಿರುಕ್ತಿಗೆಯ್ಯಬೇಕು. ಅಥವಾ ವ್ಯುತ್ಪಾದಿಸಬೇಕು, ಈ ಶಬ್ದದ ಅವಯ

ವಗಳನ್ನು ಪರೀಕ್ಷಿಸಲು ಶಬ್ದವು ಪ್ರಯೋಗವಾಗುವ ಅರ್ಥಕ್ಕು ಅವಯವಗಳ ಅರ್ಥಕ್ಕೂ ಒಡೆದು ಏಕತ್ವವು ತೋರದಿದ್ದರೆ ಅಂದರೆ ಹಾರಕ ಕಾರಕ ಮುಂತಾದ ಶಬ್ದಗಳಂತೆ— ಸಮುದಾಯಕ್ಕೂ [ ಹಾರಕವೆಂಬ ಇಡೀ ಪದದ ಅರ್ಥಕ್ಕೂ ) ಅವಯವಾರ್ಥಕ್ಕೂ ( ಆ ಪದದೊಳಗಿನ ಪ್ರಕೃತಿ ಪ್ರತ್ಯಯಗಳೆಂಬ ಭಾಗಗಳ ಅರ್ಥಕ್ಕೂ ) ಏಕತ್ವವು ತೋರದಿದ್ದರೆ ಆ ಎರಡೂ ಅರ್ಥಗಳಿಗೆ ಸಾಮಾನ್ಯವಾದ ಅರ್ಥವಾವುದಾದರು ಉಂಟೊ ಎಂದು ನೋಡಿ ಆ ಸಾಮಾನ್ಯಾರ್ಥದಿಂದ ಶಬ್ದವನ್ನು ವ್ಯುತ್ಪಾದಿಸಬೇಕು. ಈ ವರ್ಗದ ಶಬ್ದಗಳಿಗೆ ಪ್ರವೀಣ ಮುಂತಾದ ಪದಗಳು ಉದಾಹರಣವಾಗಿವೆ. ಹೇಗೆಂದರೆ ಲೋಕದಲ್ಲಿ ವ್ಯಾಕರಣದಲ್ಲಿ ಪ್ರವೀಣನು. ಗಣಿತದಲ್ಲಿ ಪ್ರವೀಣನು. ಎಂದು ಮುಂತಾಗಿ ಅನ್ನುವರು. ಪ್ರವೀಣನೆಂದರೆ ಬಲ್ಲವನೆಂಬರ್ಥವು. ಆದರೆ ಪ್ರವೀಣಶಬ್ದವನ್ನು ಬಿಡಿಸಿ ಅದರ ಅವಯವಗಳ ಅರ್ಥವನ್ನು ತಿಳಿದು ಆದರಿಂದ ಪ್ರವೀಣನೆಂಬ ಶಬ್ದಾರ್ಥವನ್ನು ತೆಗೆಯಹೋದರೆ ಅದು ಸುಲಭವಾಗಿ ಹೊರಡುವುದಿಲ್ಲ. ಪ್ರವೀಣಶಬ್ದವನ್ನು ಬಿಡಿಸಿದರೆ ವೀಣೆಯಲ್ಲಿ ಪ್ರಕೃಷ್ಟನು— ಹೆಚ್ಚಿನವನು ಎಂಬರ್ಥವು ಹೊರಡುತ್ತದೆ. ಈ ಅರ್ಥವು ಗಾಂಧರ್ವವಿದ್ಯೆಯಲ್ಲಿ ಸಂಗತವಾಗುವಂತೆ ವ್ಯಾಕರಣ ಮತ್ತು ಗಣಿತ ಮೊದಲಾದ ವಿದ್ಯೆಗಳಲ್ಲಿ ಸಂಗತವಾಗುವುದಿಲ್ಲ. ಆಗ ವಿಚಕ್ಷಣನು ನಿರುಕ್ತಿಯಲ್ಲಿ ಅನಾದರನಾಗದೆ ಗಾಂಧರ್ವದಲ್ಲಿ ವೀಣಾಕುಶಲನಾಗಲು ಅಭ್ಯಾಸಪಟುತ್ವವಿರಬೇಕು, ಈ ಅಭ್ಯಾಸಪಟುತ್ವವು ಸರ್ವವಿದ್ಯಾಕುಶಲತೆಗೂ ಸಾಮಾನ್ಯವಾದುದು ಎಂಬುದನ್ನು ಕಂಡುಹಿಡಿದು ಪ್ರವೀಣ ಶಬ್ದಾರ್ಥವನ್ನು ಅಭ್ಯಾಸಪಟುತ್ವವುಳ್ಳಾತನು. ಅರ್ಥಾತ್ ಕುಶಲನು ಎಂದು ನಿರ್ವಚಿಸಬೇಕು. (೪) ಅರ್ಥಸಾಮಾನ್ಯವೂ ತೋರದಿದ್ದಲ್ಲಿ ಅಕ್ಷರಸಾಮಾನ್ಯದಿಂದ ವ್ಯುತ್ಪತ್ತಿಯನ್ನು ಹೇಳಬೇಕು. ಅಂತಹ ಪದಗಳಿಗೆ ನಂಮ ಆಗಮಗಳು ನಿರ್ವಚಿಸುವ ವೀರಶೈವ ಶಬ್ದವೇ ಉದಾಹರಣವಾಗಿದೆ. ವೀರಶೈವದೊಳಗಿನ ವೀರ ಎಂಬುದನ್ನು ವಿ ಮತ್ತು ರ ಎಂಬ ಅಕ್ಷರಸಾಮಾನ್ಯದಿಂದ ವಿದ್ಯೆಯಲ್ಲಿ ಅರ್ಥಾತ್, ಶಿವಜೀವೈಕ್ಯ ವಿದ್ಯೆಯಲ್ಲಿ ರಮಿಸುವ ಶೈವನೆಂತಲೂ ವಿಕಲ್ಪರಹಿತನಾದ

ಶೈವನೆಂತಲೂ ಮಾಡುವರು. ಕಠಿಣ ಶಬ್ದಗಳ ನಿರ್ವಚನಕ್ಕಾಗಿಯೆ ನಿರುಕ್ತಶಾಸ್ತ್ರವಿರುತ್ತದೆ. ಆದರಿಂದ ಈನಿಯಮಗಳನ್ನರಿಯತಕ್ಕದು. ಮತ್ತೇನೆಂದರೆ. ನಿರುಕ್ತಿಯನ್ನು ಮಾಡುವಾಗ ಅವಶ್ಯನಿದ್ದಲ್ಲಿ ವಿಭಕ್ತಿಗಳನ್ನು ವಿಪರಿಣಾಮಹೊಂದಿಸಬಹುದು. ವರ್ಣಲೋಪವನ್ನು ಒಡಂಬಡಬೇಕು. ವರ್ಣಾಗಮವನ್ನೂ ವರ್ಣವಿಕಾರವನ್ನೂ ಒಪ್ಪಬೇಕು. ಇಂತಿವೆಲ್ಲ ನಿಯಮಗಳು ನೈರುಕ್ತರಿಗಷ್ಟೆಯಲ್ಲ ವೈಯಾಕರಣರೂ ಇವುಗಳನ್ನು ಒಡಂಬಡುವರು. ಒಡಂಬಡದಿದ್ದರೆ ಸ್ತಃ ಸಂತಿ ಮೊದಲಾದ ರೂಪಗಳೂ, ಗತ್ವಾ ಮೊದಲಾದ ಶಬ್ದಗಳೂ, ರಾಜಾ, ದಂಡೀ ಮೊದಲಾದ ಪ್ರಯೋಗಗಳೂ, ಹನ್ ಧಾತುವಿನಿಂದ ಘನ ಶಬ್ದವೂ ದ್ಯುತ್. ಧಾತುವಿನಿಂದ ಜ್ಯೋತಿಃ ಶಬ್ದವೂ ಇತ್ಯಾದಿಗಳು ಸಿದ್ಧವಾಗಲಿಕ್ಕಿಲ್ಲ.

ಅಥ ನಿರ್ವಚನ ತದ್ಯೇಷು ಪದೇಷು ಸ್ವರಸಂಸ್ಕಾರೌ ಸಮರ್ಥೌ ಪ್ರಾದೇಶಿಕೇನ ಗುಣೇನಾನ್ವಿತೌ ಸ್ಯಾತಾಂ ತಥಾತಾನಿ ನಿಬ್ರೂಯಾತ್ ಅಥಾನನ್ವಿತೇರ್ಥೇ ಪ್ರಾದೇಶಿಕೇ ವಿಕಾರೇ ಅರ್ಥನಿತ್ಯಃ ಪರೀಕ್ಷೇತ ಕೇನಚಿದ್ವೃತ್ತಿ ಸಾಮಾನ್ಯೇನಾ ವಿದ್ಯಮಾನೇಸಾಮಾನ್ಯೇಪ್ಯಕ್ಷರವರ್ಣ ಸಾಮಾನ್ಯಾನ್ನಿಬ್ರೂಯಾತ್ ನತ್ವೇವನನಿಬ್ರೂಯಾತ್ ನ ಸಂಸ್ಕಾರ ಮಾದ್ರಿಯೇತ ವಿಶಯವತ್ಯೋಹಿ ವೃತ್ತಯೋ ಭವಂತಿ ಯಥಾರ್ಥಂ ವಿಭಕ್ತೀಃ ಸನ್ನಮಯೇತ್ ಪ್ರತ್ತಮವತ್ತಮಿತಿ ಧಾತ್ವಾದೀ ಏವಶಿಷ್ಯೇತೇ ಅಥಾಪ್ಯಸ್ತೇರ್ನಿವೃತ್ತಿಸ್ಥಾನೇಷ್ವಾದಿಲೋಪೋಭವತಿಸ್ತಃ ಸಂತೀತ್ಯಥಾಪ್ಯಂತಲೋಪೋಭವತಿ ಗತ್ವಾಗತಮಿತ್ಯುಪಧಾಲೋಪೋಭವತಿ ಜಗ್ಮತುರ್ಜಗ್ಮುರಿ ತ್ಯಥಾ ಪ್ಯುಪಧಾವಿಕಾರೋಭವತಿ ರಾಜಾದಂಡೀತ್ಯಥಾಪಿ ವರ್ಣಲೋಪೋಭವತಿ ತತ್ವಾಯಾಮೀತ್ಯಥಾಪಿದ್ವಿವರ್ಣಲೋಪಸ್ತೃಚ ಇತ್ಯಥಾ ಪ್ಯಾದಿವಿಪರ್ಯಯೋ ಭವತಿ ಜ್ಯೋತಿರ್ಘನೋ ಬಿಂದುರ್ವಾಟ್ಯ ಇತ್ಯಥಾ ಪ್ಯಾದ್ಯಂತವಿಪರ್ಯಯೋ ಭವತಿಸ್ತೋಕಾ ರಜ್ಜುಃ ಸಿಕತಾಸ್ತರ್ಕ್ವಿತ್ಯಥಾಪ್ಯಂತ ವ್ಯಾಪತ್ತಿರ್ಭವತಿ" ] ಯಾಸ್ಕನಿರುಕ್ತ, ದ್ವಿತೀಯಾಧ್ಯಾಯ ಪ್ರಥಮಪಾದ ಪ್ರಥಮ ಖಂಡ ।

ಈ ನಿಯಮಗಳನ್ನು ಲಕ್ಷ್ಯದಲ್ಲಿಟ್ಟು ಬಸವ ಶಬ್ದವನ್ನು ನಿರ್ವಚಿಸುವ; ಇದನ್ನು ಆವ ಅರ್ಥಪ್ರತ್ಯಾಯಕವೆಂದು ವೀರಶೈವರು ತಿಳಿದುಕೊಂಡಿರುವರು? ಅಥವಾ ಬಸವವಚನಗಳಿಂದಲೆ ಬಸವನು ಆವ ತತ್ವಗಳ ಮೂರ್ತಸ್ವರೂಪನೆಂದು ತಿಳಿದು ಬರುತ್ತದೆ? ಮೇಲೆ ಬಸವನ ವಚನಗಳಲ್ಲಿ ಲಿಂಗಾಯತ ಧರ್ಮಸ್ವರೂಪವಾದ ಆರು ಅಂಗಸ್ಥಳಗಳೂ ಆರು ಲಿಂಗಸ್ಥಳಗಳೂ ಅಡಕವಾಗಿರುವದನ್ನೂ ಆ ಸ್ಥಳಗಳು ಆತನ ಸ್ವರೂಪವಾಗಿರುವದನ್ನೂ ಕಂಡೆವು. ಹಿಂದಿನ ಕವಿಗಳೂ, ಗುರುಗಳೂ, ವಿರಕ್ತರೂ, ಭಕ್ತರೂ ಆತನು ಧರ್ಮಸ್ವರೂಪನೆಯೆಂದು ತಿಳಿದುಕೊಂಡಿದ್ದರೆಂಬುದಾದರು ಮನವರಿಕೆಯಾಗಿದೆ. ಬಸವಾಭಿಧಾನವು ಗುರುಲಿಂಗಜಂಗಮಬೋಧಕವೆಂದು ವೀರಶೈವ ಗ್ರಂಥಗಳು ಪ್ರತಿಪಾದಿಸುವುದನ್ನು ಕಂಡೆವು. ಆ ನಾಮವು ಲಿಂಗಾಯತರು ಜಪಿಸತಕ್ಕ ಮಂತ್ರವಾಗಿದೆಯೆಂದು ಪಾಪತಮರಾದ ನಿಂದಕರು ಒಡಂಬಡುತ್ತಾರೆ; ಕಿಂಬಹುನಾ ಇದೇ ಅವರ ಹೊಟ್ಟೆಯುರಿಗೆ ಬೀಜವು. ಇದೆಲ್ಲ ಸಾರವು ಬಸವನಾಮ ನಿರ್ವಚನವನ್ನು ಸಂಸ್ಕೃತ ಧಾತುಗಳಿಂದ ಮಾಡಲು ಹೊರಡುತ್ತದೆಯೊ? ಅಹುದು. ಬ-ಗುರು, ಸ-ಲಿಂಗವು, ವ-ಜಂಗಮ ಎಂಬರ್ಥವು ವ್ಯಾಕರಣ ನಿರುಕ್ತ ಶಾಸ್ತ್ರಗಳ ಪ್ರಮಾಣದಿಂದ ನಿಷ್ಪನ್ನವಾಗುತ್ತದೆ. ಬಲ ನಿರೂಪಣೇ ಬಾಲಯತೇ ಧರ್ಮಂಧೀರಃ ಎಂಬ ಕವಿಕಲ್ಪದ್ರುಮದ ಪ್ರಮಾಣದಿಂದ ಬಲ ಎಂಬ ಧಾತುವು ನಿರೂಪಿಸು ಎಂಬರ್ಥದಲ್ಲುಂಟು. ಬಾಲಯತೇ ಇತಿ ಬ-ಗುರುಃ ಇಂತೆಂದು ಅರ್ಥವು ಅಗುತ್ತದೆ. ಹೇಗೆಂದರೆ "ಅನ್ಯೇಭ್ಯೋಽಪಿದೃಶ್ಯತೇ" ಎಂಬ ಸೂತ್ರದಿಂದ ಬಲಧಾತುವಿಗೆ ಡ ಪ್ರತ್ಯಯವು ಪರವಾಗಲು ಬ ಎಂಬ ರೂಪವು ಸಿದ್ಧವಾದಿತು. ಇದರಂತೆ ಸಂಸ್ಕೃತದಲ್ಲಿ ಅನೇಕ ಶಬ್ದಗಳು ವ್ಯುತ್ಪಾದಿತವಾಗಿವೆ. ಉದಾಹರಣೆ-ಖ ಶಬ್ದವು ಪುಲ್ಲಿಂಗದಲ್ಲಿ ಸೂರ್ಯನನ್ನೂ ನಪುಂಸಕದಲ್ಲಿ ಆಕಾಶವನ್ನು ಅಥವಾ ಇಂದ್ರಿಯವನ್ನು ಬೋಧಿಸುತ್ತದೆ. ಖರ್ವ-ಗಮಿಸು ಅಥವಾ ಖನು-ತೋಡು ಎಂಬೀ ಧಾತುಗಳಿಗೆ ಡ ಪ್ರತ್ಯಯ ಸೇರಿ ಖ ಶಬ್ದವಾಗಿರುತ್ತದೆ. ಅದರಂತೆಯೆ ಗೈ ಧಾತುವಿಗೆ ಮತ್ತು ಗಮ ಧಾತುವಿಗೆ ಡ ಪ್ರತ್ಯಯವು ಸೇರಿ ಗ ಶಬ್ದವು ಅನುಕ್ರಮವಾಗಿ

ನಪುಂಸಕದಲ್ಲಿಯೂ ಪುಲ್ಲಿಂಗದಲ್ಲಿಯೂ ಗಾನವನ್ನೂ ಗಮನಕರ್ತೃವನ್ನೂ ಬೋಧಿಸುತ್ತದೆ. ಇದೇ ಬಲನಿರೂಪಣೇ ಎಂಬ ಧಾತುವಿಗೆ ಭಾವದಲ್ಲಿ ಡ ಪ್ರತ್ಯಯವನ್ನು ಹಚ್ಚಿ ಬ ಶಬ್ದವನ್ನು ವ್ಯುತ್ಪಾದಿಸಿ ಅದಕ್ಕೆ ನಿರೂಪಣ ಆದರೆ ನಿರೂಪಿಸೋಣ ಎಂಬೀ ಅರ್ಥವನ್ನು ಶಬ್ದಕಲ್ಪದ್ರುಮಕಾರನೂ ಶಬ್ದಸ್ತೋಮ ಮಹೋದಧಿಕಾರನೂ ಕೊಟ್ಟಿರುವರು. ಆದುದರಿಂದ ಖ - ಸೂರ್ಯನು ಎಂಬರ್ಥದಲ್ಲಿ ಖರ್ವ ಧಾತುವಿಗೆ ಡ ಪ್ರತ್ಯಯವನ್ನು ಕರ್ತೃವಾಚಕವಾಗಿ ಹಚ್ಚಿದಂತೆ ಇಲ್ಲಿ ಬಲ ಧಾತುವಿಗೆ ಡ ಪ್ರತ್ಯಯವನ್ನು ಅದೇ ಅರ್ಥದಲ್ಲಿ ಹಚ್ಚಿ ಬ ಶಬ್ದವನ್ನು ನಿಷ್ಪಾದಿಸಿದರೆ ಬ - ಗುರುವು ಎಂದು ಸಿದ್ಧವಾಗುತ್ತದೆ. ಸೋ ಅಂತಕರ್ಮಣಿ ಎಂಬೀ ಧಾತುವಿಗೆ ಅದೇ ಕರ್ತೃವಾಚಕ ಡ ಪ್ರತ್ಯಯವನ್ನು ಪ್ರೇರಣಾರ್ಥಕದಲ್ಲಿ ಹಚ್ಚಲು ಸರ್ವವನ್ನೂ ತನ್ನೊಳಗೆ ಅಂತಗೊಳಿಸುವನಾದರಿಂದ ಸ ಶಬ್ದಕ್ಕೆ ಲಿಂಗರೂಪನಾದ ಶಿವನು ವಾಚ್ಯನು. ಶಬ್ದಕಲ್ಪದ್ರುಮದಲ್ಲಿ ಸ ಶಬ್ದವು ಈಶ್ವರನಾಮಪರ್ಯಾಯವೆಂದು ಕೊಡಲ್ಪಟ್ಟಿದೆ. ಆದುದರಿಂದ ಸಕಾರಕ್ಕೆ ಲಿಂಗವೆಂಬರ್ಥವು. ವಾ ಸುಖಾಪ್ತೌವಾಪಯತಿವಾಪಯತೇ ಎಂಬ ಚುರಾದಿ ಗಣದ ಧಾತುವಿನಿಂದ ಡ ಪ್ರತ್ಯಯಾಂತವಾಗಿ ವ ಶಬ್ದವಾಗುತ್ತದೆ. ವರ್ಣಾಶ್ರಮಾಚಾರಮಾರ್ಗನಿಷ್ಠಾತ್ಪರಾಙ್ಮುಖಃ । ಸರ್ವೋತ್ಕೃಷ್ಟಂ ಸ್ವಮಾತ್ಮಾನಂ ಪಶ್ಯನ್ಯೋಗೀತು ಮೋದತೇ ॥ ಎಂಬ ಸಿದ್ಧಾಂತ ಶಿಖಾಮಣ್ಯುದಾಹೃತ ವಚನದಿಂದ ಸ್ವರೂಪಾನಂದದ ಅಥವಾ ಸ್ವರೂಪಸುಖದ ಪ್ರಾಪ್ತಿಯನ್ನು ಹೊಂದಿದ ಪರಜಂಗಮವು ವ ಶಬ್ದದಿಂದ ಹೇಳಲ್ಪಡುತ್ತದೆ. ಆದುದರಿಂದ ಬಸವ ಎಂಬ ನಾಮವು ಬಕಾರವಾಚ್ಯ ಗುರು. ಸಕಾರವಾಚ್ಯ ಲಿಂಗ ಮತ್ತು ವಕಾರವಾಚ್ಯ ಜಂಗಮ ಎಂಬೀ ಮೂರರ ಒಬ್ಬುಳಿಯಾದ ಪರವಸ್ತುವಿನ ವಾಚಕವಾಗಿರುತ್ತದೆ.

ಬಸವ ಎಂಬ ಒಂದು ನಾಮವನ್ನು ಬಲ ಸೋ. ವಾ ಎಂಬ ಮೂರು ಧಾತುಗಳಿಂದ ವ್ಯುತ್ಪಾದಿಸುವುದು ಅಸಮಂಜಸವೆಂದೆನಲಾಗದು. ಶಾಕಟಾಯನಾದಿ ನಿರುಕ್ತಕಾರರು ಸತ್ಯಾದಿ ಪದಗಳನ್ನು ಒಂದೊಂದು ವರ್ಣಕ್ಕೆ ಒಂದೊಂದು ಧಾತುವಿನಿಂದ ಉತ್ಪತ್ತಿಗೊಳಿಸಿರುವರು. ಹೇ

ಗಂದರೆ, ಶಾಕಟಾಯನನು ಸತ್ಯ ಶಬ್ದದಲ್ಲಿ ಸತ್+ಯ ಎಂಬ ಅವಯ ವಗಳನ್ನು ಬಿಡಿಸಿ ಸತ್ ಎಂಬ ಅವಯವವನ್ನು ಅಸ್ ಭುವಿ ಎಂಬ ಅ ದಾದಿಗಣದ ಧಾತುವಿಗೆ ವರ್ತಮಾನ ಕೃದಂತ ಪ್ರತ್ಯಯವಾದ ಶತೃವ ನ್ನುಹಚ್ಚಿ ಸಾಧಿಸುವನು. ಮತ್ತು ಇಣ್‌ಗತೌ ಎಂಬ ಗತ್ಯರ್ಥಕ ಇ ಧಾತುವಿನ ಪ್ರೇರಣಾರ್ಥಕವಾದ ಆಯಯತಿ ಎಂಬ ರೂಪವನ್ನು ಸಿದ್ಧ ಪಡಿಸಿ ಅದರೆಡಳಗಿನ ಯಕಾರವನ್ನು ಮಕಾರಂತವನ್ನಾಗಿಸಿ ಸತ್+ಯ ಮ್=ಸತ್ಯಮ್ ಎಂಬ ರೂಪವನ್ನು ಉಪಪಾದಿಸಿ ಅದರ ಅರ್ಥವನ್ನು ಸಂತಮರ್ಥಮಾಯಯತಿಗಮಯತೀತಿ ಸತ್ಯಂ=ಉಳ್ಳ ಅರ್ಥವನ್ನೆ ತಿ ಳುಹುತ್ತದಾದುದರಿಂದ ಸತ್ಯವು ಎಂದಿಂತಾಗಿ ಮಾಡಿರುವನು. ಸಾ ರಾಂಶ— ಸತ್ಯ ಎಂಬ ಒಂದೆ ಶಬ್ದವನ್ನು ಅಸ್ ಹಾಗು ಇ ಎಂಬಿವೆರಡು ಧಾತುಗಳಿಂದ ವ್ಯುತ್ಪತ್ತಿ ಮಾಡಿ ಉಳ್ಳ ಅರ್ಥವನ್ನು ಬೋಧಿಸುವುದು ಸತ್ಯವು ಎಂದು ನಿರುಕ್ತಿಯನ್ನು ಮಾಡಿರುವನು. ಇಂತಹ ನಿರುಕ್ತಿಗೆ ಗಾರ್ಗ್ಯನು ಮಾಡುವ ಆಕ್ಷೇಪಕ್ಕೆ ಯಾಸ್ಕ ಮಹರ್ಷಿಯು ಒಳ್ಳೆ ಸ ದುತ್ತರವನ್ನು ಕೊಟ್ಟಿರುವನು. ಗಾರ್ಗ್ಯನ ಆಕ್ಷೇಪವು—ಪದೇಭ್ಯಃ ಪದೇತರಾರ್ಧಾನ್‌ಸಂಚಸಾಕ್ಕಾರ ಶಾಕಟಾಯನ ಏತೇಃ ಕಾರಿತಂಚ ಯಕಾ ರಾದಿಂ ಚಾಂತಕರಣಮಸ್ತೇಃ ಶುದ್ಧಂಚ ಸಕಾರಾದಿಂ ಚ ॥ ನಿ. ೧–೩೪. ಬೇರೆ ಬೇರೆ ಆಖ್ಯಾತಪದಗಳಿಂದ ಅವಯವಗಳನ್ನು ತಕ್ಕೊಂಡು ನಾಮ ಪದದ ಬೇರೆ ಬೇರೆ ಅವಯವಗಳನ್ನು ಸಂಸ್ಕರಿಸಿದನು. ಹೇಗಂದರೆ, ಸತ್ಯ ಶಬ್ದದಲ್ಲಿ “ಇ” ಧಾತುವಿನ ಪ್ರೇರಣಾಂತ ರೂಪವನ್ನು ಮಾಡಿ ಅದರೊಳಗಿಂದ (ಆಯಯತಿ ಎಂಬುದರೊಳಗಿಂದ) ಕಡೆಯ ಯಕಾರವ ನ್ನು ತಕ್ಕೊಂಡು ಅದನ್ನು ಮಕಾರಾಂತವನ್ನು ಮಾಡಿ (ಯಂ) ಅಸ್ ಧಾತುವಿನ ಶುದ್ಧ ರೂಪವನ್ನು (ಪ್ರೇರಣಾಂತವಲ್ಲ) ಮಾಡಿ ಅದರೊ ಳಗಿಂದ ಸತ್ ಎಂಬ ಶಬ್ದರೂಪವನ್ನು ತಕ್ಕೊಂಡು ಅದನ್ನು ಸತ್ಯ ಶಬ್ದದ ಆದ್ಯಾವಯವವನ್ನಾಗಿಸಿದನು. ಹೀಗೆ ಸತ್ಯಶಬ್ದವನ್ನು ವ್ಯು ತ್ಪಾದಿಸುವುದು ಅಸಮಂಜಸವು. ಇದಕ್ಕೆ ಯಾಸ್ಕನ ಉತ್ತರವು— “ಯಥೋ ಏತತ್ಪದೇಭ್ಯಃ ಪದೇತರಾರ್ಧಾನ್ ಸಂಚಸ್ಕಾರೇತಿ ಯೋನ

ನ್ಯಿತೇರ್ಥೇ ಸಂಚಸ್ಕಾರ ಸತೇನ ಗರ್ಹ್ಯ: ಸೈಷಾಪುರುಷ ಗರ್ಹಾನ ಶಾಸ್ತ್ರಗರ್ಹಾ" ನಿ ೧-೧೪. ಗ್ಯಾರ್ಗ್ಯನು ಹಲವು ಆಖ್ಯಾತ ಪದಗಳಿಂದ ಬೇರೆ ಬೇರೆ ಅವಯವಗಳನ್ನು ತಕ್ಕೊಂಡು ನಾಮಪದದ ಬೇರೆ ಬೇರೆ ಭಾಗಗಳ ಉಪಪತ್ತಿ ಮಾಡುವುದನ್ನುಗಾರ್ಗ್ಯನು ಆಕ್ಷೇಪಿಸುತ್ತಾನಲ್ಲವೆ, ಇದು ಸರಿಯಲ್ಲ. ನಾಮಪದದಲ್ಲಿ ಗರ್ಭಿತವಾಗದ ಅರ್ಥವನ್ನು ಹಲವು ಆಖ್ಯಾತಪದಗಳಿಂದ ತಂದರೆ ದೋಷವು. ಇದು ನಿರ್ವಚನ ಮಾಡುವವನ ದೋಷವಾಗಬಹುದು. ಆದರೆ ಆ ನಾಮದಲ್ಲಿದ್ದ ಅರ್ಥವನ್ನು ಹಲವು ಆಖ್ಯಾತಗಳಿಂದ ಹೊರಡಿಸುವುದು ಭೂಷಣವೆ. ಯಾಸ್ಕ ಮಹರ್ಷಿಯು ಈ ಉಕ್ತಿಗೆ ನಂಮ ವೀರಶೈವ ಶಾಸ್ತ್ರಗಳು ವೀರಶೈವ ಶಬ್ದದೊಳಗಿನ ವೀರ ಎಂಬ ಅವಯವವನ್ನು ವಿಕಲ್ಪ-ಹಿತ: ಎಂತಲೂ ವಿದ್ಯಾಯಾಂ ರಮತೇ ಎಂತಲೂ ಹಲವು ಧಾತುಗಳಿಂದ ವ್ಯುತ್ಪಾದಿಸುವುದಾದರು ಉದಾಹರಣವಾಗಿದೆ.

ಸಂಸ್ಕೃತ ಬಸವಪುರಾಣಕಾರನೂ ಪ್ರಭುಲಿಂಗಲೀಲಾಕರ್ತನೂ ಹೇಳುವ ಉಪಪತ್ತಿಗಳಾದರೂ ಶುದ್ಧವಿರುತ್ತವೆ. ಒಂದೇ ಬಸವ ಶಬ್ದವನ್ನು ನೀವು ಬಲ, ಸೋ, ವಾ ಎಂದ ಧಾತುಗಳಿಂದಲು ಇವರೀರ್ವರು ಪುರಾಣ ಕರ್ತರು ಮತ್ತುಳಿದ ವಸ ಮುಂತಾದ ಧಾತುಗಳಿಂದಲು ಸಾಧಿಸುವುದು ಅನ್ಯಾಯವೆನಬೇಡಿ. ಶಿವ ಶಬ್ದವನ್ನು ಕೆಲವರು ವೈಯಾಕರಣ ರೀತಿಯಿಂದ ಶೀಙ್ ಸ್ವಪ್ನೇ ಎಂಬ ಧಾತುವಿನಿಂದ ಸಾಧಿಸುವರು. ಸರ್ವನಿಘೃಷ್ವರಿಷ್ವಲಷ್ವಶಿವಪಟ್ವಪ್ರಹ್ವೇಷ್ವಾಅತಂತ್ರೇ॥ ಎಂಬ ಉಣಾದಿ ಸೂತ್ರದಿಂದ ಶೀಙ್ ಧಾತುವಿಗೆ ವನ್ ಪ್ರತ್ಯಯವು ಹತ್ತಿ ಶೇರತೆ ಅಸ್ಮಿನ್ ಭುವನಾನಿ ಅಣಿಮಾದ್ಯಷ್ಟೈಶ್ವರ್ಯಗಳೂ ಅಡಕವಾಗಿರುವುವೊ ಆತನು ಶಿವನು ಎಂದು ಉಪಪತ್ತಿಯನ್ನು ಮಾಡುವರು. ವಶಕಾಂತೌ ಕಾಂತಿರಿಚ್ಛಾ ಎಂಬ ಧಾತುವಿನಿಂದಲು ಶಿವ ಶಬ್ದವನ್ನು ಸಾಧಿಸಿ ಇಚ್ಛಾಶಕ್ತಿಯುಕ್ತನು ಅರ್ಥಾತ್ ಸ್ವತಂತ್ರನು ಎಂಬರ್ಥವನ್ನು ಕೆಲವರು ಹೇಳುವರು. ಇದಕ್ಕೆ ಅಭಿಯುಕ್ತ ವಚನವು—"ಹಿಸಿ ಧಾತೋ: ಸಿಂಹಶಬ್ದೋ ವಶಕಾಂತೌ ಶಿವ:ಸ್ಮೃತಃ । ವರ್ಣ

ವ್ಯತ್ಯಯತಃ ಸಿದ್ಧೌ ಪಶ್ಯಕಃ ಕಶ್ಯಪೋಯಥಾ" ॥ ಹಿಂಸ ಧಾತುವಿನಿಂದ ಸಿಂಹ ಶಬ್ದವೂ ವಶಧಾತುವಿನಿಂದ ಶಿವಶಬ್ದವೂ ವರ್ಣವ್ಯತ್ಯಯದಿಂದ ಪಶ್ಯಕ ಶಬ್ದವು ಕಶ್ಯಪನೆಂಬಾದಂತೆ ಆಗಿರುವುವು. ಇದರಂತೆ ಇನ್ನೂ ಅನೇಕ ಈಶ್ವರ, ಸಿಂಹ ಮೊದಲಾದ ಶಬ್ದಗಳನ್ನು ಹಲವು ಧಾತುಗಳಿಂದ ಉಪಪತ್ತಿ ಮಾಡುವರು. ಯಾಸ್ಕನಾದರು "ವಿಶಯತೋಕೀ ಹಿ ಶಬ್ದವೃತ್ತಯೋಭವಂತಿ" ಶಬ್ದಗಳು ತಂಮ ತಂಮ ಅರ್ಥದಲ್ಲಿ ನಾನಾ ಪ್ರಕಾರದ ವೃತ್ತಿಗಳಿಂದ ಚರಿಸುತ್ತವೆ. ಅಂದರೆ ಒಂದು ಪದಾರ್ಥವು ಆ ಪದದಿಂದ ಕರೆಯಲ್ಪಡಬೇಕಾದರೆ ಹಲವು ಕಾರಣಗಳಿರಬಹುದು. ಉದಾಹರಣ— ಶಿವ ಶಬ್ದದಿಂದ ಪರಮೇಶ್ವರನು ವಾಚ್ಯನಾಗಲಿಕ್ಕೆ ಮೇಲೆ ಹೇಳಿದ ಎರಡೂ ಕಾರಣಗಳು ಸಮರ್ಥವಿರುತ್ತವೆ, ಸಕಲ ಭುವನಗಳೂ ಅಣಿಮಾದ್ಯಷ್ಟೈಶ್ವರ್ಯಗಳು ತನ್ನಲ್ಲಡಕವಾಗಿರುವುದರಿಂದಲು ಸ್ವಾತಂತ್ರ್ಯಶಕ್ತಿಯುಳ್ಳನಾದುದರಿಂದಲು ಶಿವನಿಗೆ ಶಿವನೆಂಬ ಹೆಸರು ಬಂದಿತು. ಈ ಎರಡೂ ವೃತ್ತಿಗಳಿಗೆ ಅನುಸರಿಸಿ ಶಿವಶಬ್ದವನ್ನು ಶೀಙ್ ಧಾತುವಿನಿಂದಲೂ ವಶಧಾತುವಿನಿಂದಲೂ ಸಂಸ್ಕರಿಸಬಹುದು, ಅಂದರೆ, ವ್ಯುತ್ಪಾದಿಸಬಹುದು.

ಇನ್ನು ಬಸವಪುರಾಣದ ಉಪಪತ್ತಿಯನ್ನು ನೋಡುವ. ಕವಿಯು ಬಸವ ಶಬ್ದವನ್ನು ಬಸ × ವ ಎಂಬ ಎರಡಂಶಗಳಿಂದ ವಿಭಾಗಿಸಿರುವನು. ಹಾಗು ವಸ ಎಂಬ ಅವಯವಕ್ಕೆ ವಸತ್ಯಸ್ಮಿನ್. ವಿಶ್ವಮಿತಿ ವಸಃ ಶಿವಃ ವಸಂತಿ ಮಹೇಶ್ವರ ಇತಿ ವಸಾಃ ಮಾಹೇಶ್ವರಾಃ ಎಂದು ಶಿವನೆಂತಲೂ ಶಿವಭಕ್ತರೆಂತಲೂ ಅರ್ಥವನ್ನು ಮಾಡಿ, ಎರಡನೆ ಅವಯವವಾದ ವಶಿಪ್ಪಕ್ಕೆ ವಾತೀತಿವಃ ಹೋಗುವವನು ಎಂದು ಅರ್ಥವನ್ನು ಹೇಳಿ ಶಿವನನ್ನು ಅಥವಾ ಶಿವಭಕ್ತರನ್ನು ಭಕ್ತಿಯಿಂದ ಆಶ್ರಯಿಸುವವನು ಎಂಬರ್ಥವನ್ನು ಬಸವ ಶಬ್ದಕ್ಕೆ ಹೇಳಿರುವನು. ವಾ ಧಾತುವಿಗೆ ಗತಿಯೆಂದೂ ಗಂಧವೆಂದರೆ ಹಿಂಸೆಯೆಂದೂ ಎರಡು ಅರ್ಥಗಳಿರುವಲ್ಲಿ ಗತ್ಯರ್ಥದಿಂದ ಮೇಲಿನೆರಡು ಉಪಪತ್ತಿಗಳನ್ನು ಕೊಟ್ಟು ಗಂಧನವೆಂಬರ್ಥದಿಂದ ಇನ್ನೊಂದ ಅರ್ಥವನ್ನು ಸೂಚಿಸುತ್ತಾನೆ. ಸಂಸಾರ

ಚಕ್ರದಲ್ಲಿ ವಾಸವಮಾಡುವ ದುರ್ಜನರು ವಸ ಎನಿಸಿಕೊಂಡರು ಅವರನ್ನು ವಿಶ್ವರಕ್ಷಣಕ್ಕಾಗಿ ವಾ ಅಂದರೆ ಹಿಂಸನಮಾಡುವುದರಿಂದ ಬಸವ ಹೆಸರು ಬಂದಿತು. ಈ ಮೂರು ಉಪಪತ್ತಿಗಳನ್ನು ಹೇಳುವ ಸೂತ್ರಗಳು ವಿಶ್ವ ವಸತಿ ಯತ್ರೈತದ್ವಸತ್ಯತ್ರಮಹೇಶ್ವರೇ । ತವೈಷ ಬಾಲಕಃ ಶ್ರೀಮಾನ್‌ಮನೋವಾಕ್ಕಾಯಕರ್ಮಭಿಃ ॥ ಆದ್ಯಸ್ಯ ಚವಕಾರಸ್ಯಹ್ಯಭೇದೇನಬಕಾರತಃ। ಏಕೋsಯಂಬಾಲಕಃಶ್ರೀಮಾನ್‌ಬಸವೇಶ್ವರನಾಮಧೃತ್ ॥ ಪರಾತ್ಪರತರೇಲಿಂಗೇ ಯೇವಸಂತಿ ಮಹೇಶ್ವರಾಃ। ಗಚ್ಛತ್ಯೇತಾನ್ ಸ್ವಯಂಭಕ್ತ್ಯಾ ತೇನಾಯಂ ಬಸವೇಶ್ವರಃ ॥ ಗತ್ಯರ್ಥಕತ್ವೇ ವಾಧಾತೋರೇತದರ್ಥ ದ್ವಯಂಸ್ಥಿತಂ ॥ ಮಹತ್ಸಂಸಾರಚಕ್ರೇಸ್ಮಿನ್ ಯೇವಸಂತಿಚ ದುರ್ಜನಾಃ। ತಾನ್ಗಂಧತೇ ಸದಾಬಾಲೋ ವಿಶ್ವರಕ್ಷಣತತ್ಪರಃ । ಹಿಂಸಾಗಂಧೇನಶಬ್ದೇನ ಪ್ರೋಚ್ಯತೇ ವರವರ್ಣಿನಿ। ಸರ್ವದಾತವಬಾಲೋsಯಂ ಬಸವೇಶ ಇತೀರ್ಯತೇ ॥

ವಸ ಶಬ್ದಕ್ಕೆ ಶಿವನು ಎಂಬರ್ಥವನ್ನು ಮಾಡಿದಲ್ಲಿ. ವಸ್ ಧಾತುವಿಗೆ “ಅಕರ್ತರಿ ಚ ಕಾರಕೇ ಸಂಜ್ಞಾಯಾಮ್” ಎಂಬಸೂತ್ರದಿಂದ ಅಧಿಕರಣದಲ್ಲಿ ಘಙ್ ಪ್ರತ್ಯಯವು ಹತ್ತಿ ವಸಂತ್ಯಸ್ಮಿನ್ ವಿಶ್ವಾನೀತಿ ವಸಃ ಎಂಬ ರೂಪಸಿದ್ಧಿಯಾದಿತು. ವಸ ಶಬ್ದಕ್ಕೆ ಮಾಹೇಶ್ವರರು ಎಂಬರ್ಥದಲ್ಲಿ “ನಂದಿಗ್ರಹಿಪಚಾದಿಭ್ಯೋ ಲ್ಯುಣಿನ್ಯಚಃ” ಎಂಬ ಸೂತ್ರದಿಂದ ವಸತೀತಿ ವಸಃ ಎಂದು ಕರ್ತ್ರರ್ಥದಲ್ಲಿ ಅಚ್ ಪ್ರತ್ಯಯವನ್ನು ಹಚ್ಚಬೇಕು. ಪಚಾದಿಯು ಆಕೃತಿಗಣವಿರುವುದರಿಂದಲು ಧಾತುಪಾಠದಲ್ಲಿ “ವಹತ್ಯಂತಾ। ಸ್ವರಿತೇತಃ” ಎಂದು ವಹತ್ಯಂತಧಾತುಗಳಲ್ಲಿ ಡುಪಚಷ್ ಪಾಕೇ ಎಂದಿಂತಾಗಿ ವಸನಿವಾಸೇ ಎಂದು ೧೧ ನೆಯದಾಗಿ ವಸಧಾತುವು ಪಠಿತವಾಗಿರುವುದರಿಂದಲೂ ವಸಧಾತುವು ಪಚಾದಿ ಗಣದಲ್ಲಿ ಸಮಾವೇಶವಾಗುತ್ತದೆ. ಇನ್ನು ವಕಾರಕ್ಕೂ ಬಕಾರಕ್ಕೂ ಅಭೇದವನ್ನು ಹೇಳುವಲ್ಲಿ, ವಾಲ-ಬಾಲ. ವಾಣ-ಬಾಣ ಎಂಬ ಮೊದಲಾದ ಪ್ರಯೋಗಗಳು ವಿಪುಲವಾಗಿ ಪ್ರಮಾಣವಾಗಿವೆ. ಬಸ ಎಂಬ ರೂಪಸಿದ್ಧಿಯಾದಿತು. ಗಮನಾರ್ಥದ ವಾ ಧಾತುವಿಗೆ ಕ ಪ್ರತ್ಯಯವು ಹತ್ತಿ ವಃ ಎಂಬ ರೂಪವಾಗುವುದನ್ನು ಮೇಲೆ

ತೋರಿಸಿರುವೆನು. ಆದುದರಿಂದ ಬಸವಪುರಾಣಕಾರನು ಹೇಳುವ ಉಪ
ಪತ್ತಿಯು ಶಾಸ್ತ್ರನಿರೂಢವಾಗಿರುವುದು.

ಪ್ರಭುಲಿಂಗಲೀಲಾಕಾರನು ವಸ್ವಾಖ್ಯಯಾಪ್ಯವಸವೋಪ್ಯವಿ
ಭೂತಿನಾಥಾಃ ಸ್ವರ್ಣಾನಿದಿವ್ಯಮಣಯಶ್ಚ ಭುವಿಪ್ರಸಿದ್ಧಾಃ॥ ತಾನ್ವಾತಿ
ಗಂಧಯತಿ ಗಚ್ಛತಿ ಚೇತಿನಾಮ್ನಾಪ್ಯನ್ವರ್ಥಕೇನ ವಸುವೊ ವಬಯೋ
ರಭೇದಾತ್॥ತಸ್ಮಾದ್ವಸೂನಿತು ಬಹೂನಿಜಯಸ್ಯಸಂತಿ ಸಂಕಲ್ಪಮಾತ್ರ
ವಶಗಾ ಮಣಯಶ್ಚಸರ್ವೇ। ಭೃತ್ಯಾ ಇವಾಪ್ಯವಸವೋನಿಧಿದರ್ಶನೇ
ಸ್ಯುಸ್ತಸ್ಯಾಪ್ಯಭೀಷ್ಟ ಫಲನಾಯ ಕಿಯಾನ್ ಹಿಭಾರಃ ॥ ೭ ಅಧ್ಯಾಯ
೭೦—೭೩ ಎಂಬೀ ಬಗೆಯಲ್ಲಿ ಅದೇ ವಸ ಮತ್ತು ವಾ ಧಾತುಗಳಿಂದ
ಶಬ್ದವ್ಯುತ್ಪತ್ತಿಯನ್ನು ಮಾಡಿರುವನು. ಕಾಶೀನಾಥಶಾಸ್ತ್ರಿಯ ಸಾಲಿ
ಯಲ್ಲಿ ವ್ಯಾಕರಣವನ್ನೋದಿದ ಹಂದಿಗೆಯ ಶಾಂತಪ್ಪನು ಇದು ತಪ್ಪೆ
ನ್ನುವ ಅಭಿಪ್ರಾಯ ಪಡುತ್ತಾನೆ, ಗರ್ವದಿಂದ "ಇವೆರಡೂ ನಿಜವಾದ
ವ್ಯುತ್ಪತ್ತಿಗಳೊ ಹೇಗೆ" ಎಂದು ಪ್ರಶ್ನೆ ಮಾಡುವನು. ಇವೆರಡೂ ನಿಜ
ವಾದ ವ್ಯುತ್ಪತ್ತಿಗಳೇ ಎಂದು ವ್ಯಾಕರಣ ನಿರುಕ್ತಶಾಸ್ತ್ರಗಳ ಪ್ರಥ
ಮಾಕ್ಷರಗಳನ್ನು ಓದುವವನು ಸಹ ಹೇಳಬಹುದು. ಮೇಲುದಾಹರಿ
ಸಿದ "ನಿಶಯ ವತೋಽಹಿ ಶಬ್ದಪ್ರವೃತ್ತಯೋ ಭವಂತಿ" ಎಂಬ ಯಾಸ್ಕ
ವಚನದಿಂದ ಒಂದಾನೊಂದು ಅರ್ಥದಲ್ಲಿ ತದ್ವಾಚಕ ಶಬ್ದಪ್ರವೃತ್ತಿ
ಯುಂಟಾಗಲಿಕ್ಕೆ ಹಲವು ನಿಮಿತ್ತಗಳಿರಬಹುದು. ಆ ಎಲ್ಲ ಕಾರಣಗಳ
ಉಪಪತ್ತಿಯನ್ನೊಳಕೊಂಡು ಒಂದು ನಾಮವು ಆ ವಸ್ತುವಿನಲ್ಲಿ ಜರಿ
ಸುತ್ತದೆ. ಶ್ರೀಬಸವನು ಬೇಡಿದ ಪದಾರ್ಥಗಳನ್ನು ಅರ್ಥಿಗಳಿಗೆ ನೀ
ಡುವ ಪಂಚಪುರುಷವುಳ್ಳಾತನು ಈ ನಿಮಿತ್ತಕ್ಕನುಸರಿಸಿಯೂ ಬಸವ
ಶಬ್ದದ ಉಪಪತ್ತಿಯನ್ನು ಪ್ರಭುಲಿಂಗಲೀಲಾಕಾರನು ಮಾಡಿರುವನು.
ವಸ ಧಾತುವಿನಿಂದ ವಸು ಶಬ್ದವು "ಶೃಸ್ವೃಸ್ನಿಹಿತ್ರಪ್ಯಸಿವಸಿಹನಿಕ್ಲಿ
ದಿಬಂಧಿಮನಿಭ್ಯಶ್ಚ" ಎಂಬ ಸೂತ್ರದಲ್ಲಿ ಸಮುಚ್ಚಯವನ್ನು ಹೇಳುವ
ಚಕಾರದಿಂದ "ಭೃಮೃಶೀತೃಚರಿತ್ಸರಿತನಿಧನಿಮಿಮಸ್ಜಿಭ್ಯ ಉಃ" ಎಂಬ
ಸೂತ್ರದಲ್ಲಿ ಹೇಳಿದ ಉ ಪ್ರತ್ಯಯವು ವಸ ಧಾತುವಿಗೆ ಪರವಾಗಲು
ವಸು ಎಂಬ ರೂಪವಾದಿತು. ವಸುವಿಗೆ ವ ಎಂಬ ಅವಯವವು ಕೂಡ

ಉ ವಸುವಃ ಎಂದು ರೂಪವಾದಿತು. ಹಿಂದೆ ಹೇಳಿದ ವರ್ಣವಿಕಾರನಿಯಮದಿಂದ ಸುಕಾರಕ್ಕೆ ಸಕಾರವಾಗುತ್ತದೆ. ವರ್ಣವಿಕಾರಕ್ಕೆ ಅನೇಕ ಉದಾಹರಣಗಳು ಹೇರಳವಾಗಿ ದೊರೆಯುತ್ತವೆ. ಅಗ್ನಿ ಶಬ್ದವನ್ನೇ ತೆಗೆದುಕೊಳ್ಳೋಣ. ಇದರ ಉಪಪತ್ತಿಯನ್ನು ಹಲವು ಬಗೆಯಾಗಿ ಮಾಡುವರು. ಒಂದು ಉಪಪತ್ತಿಯು "ಅಂಗೇರ್ನಲೋಪಶ್ಚ" ಎಂಬೀ ಸೂತ್ರದಿಂದ "ವಿಜ್ಯಾಜರಿಭ್ಯೋನಿಃ" ಎಂಬ ಸೂತ್ರಪಠಿತವಾದ ನಿ ಪ್ರತ್ಯಯವು ಆಗಿ ಗತೌ ಧಾತುವಿಗೆ ಹತ್ತಿ ನಕಾರವು ಲೋಪವಾಗಿ ಅಗ್ನಿ ಶಬ್ದವಾಗುವುದು. ಶಾಕಪೂಣಿ ಎಂಬ ನಿರುಕ್ತಿಕಾರನು ಮೂರು ಧಾತುಗಳಿಂದ ಅಗ್ನಿ ಶಬ್ದನಿಷ್ಪತ್ತಿಯನ್ನು ಮಾಡುವನು. ಅಗ್ನಿ ಶಬ್ದಕ್ಕೆ ಅಕಾರ ಗಕಾರ ನಿಕಾರಗಳು ಬೇಕು. ಏತಿ ಧಾತುವಿನಿಂದ ಹುಟ್ಟಿದ ಅಯನ ಶಬ್ದದಿಂದ ಅಕಾರವನ್ನು ಅನಕ್ತಿಧಾತುವಿನ ಕಕಾರಕ್ಕೆ ಗಕಾರಾದೇಶವನ್ನು ಮಾಡಿ, ಗಕಾರವನ್ನು ಅಥವಾ ದಹತಿ ಧಾತುವಿನಿಂದಾದ ದಗ್ಧ ಶಬ್ದದಿಂದ ಗಕಾರವನ್ನು, ಹಾಗು ನೀ ಧಾತುವಿನಿಂದ ನೀಕಾರಕ್ಕೆ ಹ್ರಸ್ವವನ್ನು ಮಾಡಿ ನಿಕಾರವನ್ನು ತೆಗೆದುಕೊಳ್ಳುತ್ತದೆ. ಯಜ್ಞಭೂಮಿಗೈದಿ ಸ್ವಕೀಯಾಂಗವನ್ನು ಹವಿಃಪಾಕದಲ್ಲಿ ಪ್ರೇರಿಸುವನೆಂಬರ್ಥ. ಶಾಕಪೂಣಿಯ ಉಪಪತ್ತಿಯಲ್ಲಿ ಕಕಾರಕ್ಕೆ ಗಕಾರಾದೇಶವಾದಂತೆ ಇಲ್ಲಿ ಸುಕಾರಕ್ಕೆ ಸಕಾರಾದೇಶವಾಗುತ್ತದೆ. ಇಂತಹ ಅನಂತೋದಾಹರಣಗಳನ್ನು ಕೊಡಬಹುದು. ಆದುದರಿಂದ ಪ್ರಭುಲಿಂಗಲೀಲಾಕಾರನ ಉಪಪತ್ತಿಯಿಂದ ಅಷ್ಟ ವಸುಗಳೂ ರತ್ನಗಳೂ ಮೊದಲಾದ ವಸುವೆಂಬ ಹೆಸರಿನಿಂದ ಜಗತ್ತಿನಲ್ಲಿ ಪ್ರಸಿದ್ಧವಿರುವ ಒಡವೆಗಳೊಡನೆ ಸಂಬಂಧಪಡುವನು. ಅಂದರೆ ಆವಾತನ ಸಂಕಲ್ಪದಿಂದಲೆ ಮಣಿಗಳೂ ಸಂಪತ್ತುಗಳೂ ವಶವರ್ತಿಗಳಾಗುತ್ತವೆಯೊ, ಹಾಗು ಆವಾತನಿಗೆ ಅಷ್ಟ ವಸುಗಳು ನಿಧಿದರ್ಶನದಲ್ಲಿ ಭೃತ್ಯರಾಗಿರುವರೊ ಆತನು ವಸುವನ್ನು ಬಸುವನು ಮತ್ತು ವರ್ಣ ವ್ಯತ್ಯಯದಿಂದ ಬಸವನು. ಈ ಎರಡೂ ಉಪಪತ್ತಿಗಳಲ್ಲಿ ಕಾಶೀನಾಥ ವ್ಯಾಕರಣವನ್ನೋದಿದ ಹಂಪಿಗೆಯ ಶಾಂತಪ್ಪನು ಒಂದೊಂದು ದೋಷವನ್ನಾರೋಪಿಸಿರುವನು. ವಸಂತೀತಿವಸಃ ಎಂದು ವಸ ಶಬ್ದಕ್ಕೆ ಗಣರು ಎಂದು ಕಲ್ಪಿಸಿಕೊಂಡುದು ಬಸವ ಪುರಾಣದಲ್ಲಿಯು

ವ್ಯುತ್ಪತ್ತಿಯು ತಪ್ಪು. ಹಾಗು ವಸು ಶಬ್ದವು ನಪುಂಸಕಲಿಂಗದಲ್ಲಿ ಪಠಿತವಿದ್ದುದನ್ನು ಪುಲ್ಲಿಂಗವಾಗಿ ಹಿಡಿದಿರುವದೊಂದು ಪ್ರಭುಲಿಂಗಲೀಲಾಕಾರನ ಪ್ರಮಾದವು. ಶಬ್ದವ್ಯುತ್ಪತ್ತಿಯನ್ನು ಮಾಡಬೇಕಾದರೆ ಆ ಶಬ್ದಾರ್ಥಗತವಾದ ಕ್ರಿಯಾಬೋಧಕ ಧಾತುವನ್ನು ಹುಡುಕಿ ಆ ಧಾತುವಿನಿಂದ ಶಬ್ದವನ್ನು ಯೋಗ್ಯವಾದ ಸಾಧಕ ಪ್ರತ್ಯಯಗಳಿಂದ ಸಿದ್ಧಪಡಿಸಬೇಕಾಗುತ್ತದೆ. ನಾಮಗತ ಕ್ರಿಯೆಗೆ ಸಂಬಂಧವಾದ ಇತರ ಕಾರಕಗಳನ್ನು ಊಹೆಯಿಂದಲೆ ಪೂರೈಸಬೇಕಾಗುತ್ತದೆ. ಉದಾಹರಣೆ-ಶಿವ ಶಬ್ದವನ್ನು ಶೀಙ್ ಸ್ವಪ್ನೇ ಎಂಬ ಧಾತುವಿನಿಂದ ಸಾಧಿಸುತ್ತಾರೆ. ಶೇರತೆ ಅಸ್ಮಿನ್ ಭುವನಾನಿ ಇತಿ ಶಿವಃ ಇವನಲ್ಲಿ ಭುವನಗಳೆಲ್ಲ ಅಡಕವಾಗಿವೆಯಾಗಿ ಶಿವನು ಎಂಬರ್ಥ. ಇಲ್ಲಿ ಶಿ ಎಂಬುದು ಶೀಙ್ ಧಾತುವಿನಿಂದ ಬಂದಿತು. ವ ಎಂಬುದು ವನ್ ಪ್ರತ್ಯಯವು. ಇದು ಅಧಿಕರಣವನ್ನು ತೋರಿಸುತ್ತದೆ. ಅಂದರೆ ಅಡಕವಾಗಿರುವ ಸ್ಥಾನವನ್ನು ವಕಾರವು ತಿಳಿಸುತ್ತದೆ. ಧಾತುವಿನಿಂದಲು ಪ್ರತ್ಯಯದಿಂದಲು ಅಡಕವಾಗಿರುವ ಸ್ಥಾನವು ಅಥವಾ ಅಧಿಕರಣವು ಶಿವನೆಂದು ತಿಳಿದಿತು. ಆದರೆ ಏನು ಅಡಕವಾಗುವದು? ಎಂಬದನ್ನು ಆ ಅಧಿಕರಣವಾದ ಶಿವಶಬ್ದಾದಿಯರ್ಥದ ಸಾಮರ್ಥ್ಯದಿಂದ ಭುವನಗಳು ಎಂದು ವ್ಯುತ್ಪಾದಕನು ಪೂರಯಿಸಬೇಕು. ಇದರಂತೆಯೆ ಇಲ್ಲಿ ವಸಂತೀತಿವಸಾ! ಎಂಬುದರಿಂದ ಶಿವನಲ್ಲಿ ವಾಸಮಾಡುವುದರಿಂದ ವಸರು ಎಂದು ಉಪಪತ್ತಿಯಾಗಲು ಶಿವನಲ್ಲಿ ವಾಸಮಾಡುವ ಯೋಗ್ಯತೆಯು ಗಣರಿಗೆಯೆ ಇರುವುದರಿಂದ ವಸರು ಎಂದರೆ ಮಾಹೇಶ್ವರರು ಎಂದು ಹೇಳಬೇಕಾದಿತು. ಸಾರಾಂಶ ಪ್ರತಿಯೊಂದು ಶಬ್ದವ್ಯುತ್ಪತ್ತಿಯಲ್ಲಿಯೂ ಊಹೆಯು ಬೇಕೇಬೇಕು. ಇನ್ನು ವಸು ಶಬ್ದವು ನಪುಂಸಕ ಪಠಿತವಿದ್ದುದನ್ನು ಪುಲ್ಲಿಂಗಕ್ಕೆ ಪರಿವರ್ತನಂ ಗೈದ ದೋಷವನ್ನು ನೋಡುವ ಮೂಲತಃ ವಸು ಶಬ್ದವು ನಿತ್ಯ ನಪುಂಸಕ ವೆಂಬುದು ಗಾಢಾಂಧಕಾರವು. "ವಸುತೋಯೇ ಮಣೌಧನೇ ವಸುರ್ಮಯೂಖಾಗ್ನಿಧನಾಧಿಪೇಷು" ಎಂಬ ಕೋಶದಿಂದ ವಸು ಶಬ್ದವು ನೀರು, ಮಣಿ ಧನವೆಂಬರ್ಥದಲ್ಲಿದ್ದಾಗ ನಪುಂಸಕವಾಗಿಯೂ, ಕಿರಣ ಅಗ್ನಿ ಕುಬೇರ, ಎಂದು ಮುಂತಾಗಿ ಇದ್ದಾಗ ಪುಲ್ಲಿಂಗ

ವಾಗಿಯೂ ಪಠಿತವಾಗಿರುವುದರಿಂದ ನಿಂದಾ ಕಲಂಕ ತಾಮಸರು ಕೋಶ ಪ್ರಮಾಣದ ಜ್ಞಾನವಿಲ್ಲದೆ ಈ ದೋಷವನ್ನಾರೋಪಿಸಿರುವರು. ಆದುದರಿಂದ ತಿಳಿಗೇಡಿಗಳಾದ ಕಾಶೀ ಮುಂತಾದ ಮತಸ್ಥರಿಂದ ಪೋಷಿತನಾಡ ಕಾಶೀನಾಥನ ತಲೆಗೆ ಭ್ರಮೆಯೇರಿರುತ್ತದಲ್ಲದೆ ಪುರಾಣಕರ್ತರ ಪಾಂಡಿತ್ಯಕ್ಕೆ ಆವ ಕೊರತೆಯು ಇಲ್ಲ. ಅವರ ಮನೆಯೊಳಗಿನ ನಾಯಿಯು ಕೈಯಲ್ಲಿ ವ್ಯಾಕರಣ ಪಾಠವನ್ನು ಹೇಳಿಸಿಕೊಳ್ಳುವ ಯೋಗ್ಯತೆಯು ಈ ನಿಂದಾ ಪ್ರಶ್ನೆಗಳನ್ನು ತೆಗೆದವನಿಗೂ ಅವನ ಪೋಷಕರಿಗೂ ಇರುವುದಿಲ್ಲ.

ಬಸವ ಶಬ್ದದ ಉಪಪತ್ತಿಯನ್ನು ಮಾಡಿರುವುದರಿಂದ ಅದು ಸಂಸ್ಕೃತವು. ಮತ್ತೇನೆಂದರ ನಿಂದಾತ್ಮಕ ಚಂಡಾಲರಿಗೆ ಈ ಪ್ರಶ್ನವನ್ನು ಕೇಳುವ ಅಧಿಕಾರವೂ ಇಲ್ಲ. ಅವರು ಲಿಂಗಾಯತರೆಂದರೆ ಶ್ರೀ ಬಸವನಿಂದ ಹುಟ್ಟಿ ಲಿಂಗಧಾರಣ ಮಾಡಿಕೊಂಡವರೆಂದಾಡುತ್ತಾರಲ್ಲವೆ ? ಹಾಗಿದ್ದ ಬಳಿಕ ಅವನಿಂದಲೆ ಲಿಂಗಧಾರಿಗಳಾದ ಲಿಂಗಾಯತರು ಅವನ ನಾಮವನ್ನು ಜಪಿಸುವುದರಲ್ಲಿ ತಪ್ಪು ಆವುದು ? ಈ ಪ್ರಶ್ನದಿಂದ ವಾದಿಗಳು ಲಿಂಗಾಯತರು ವೀರಶೈವರಲ್ಲೆಂದು ಬಡಬಡಿಸಿದುದನ್ನು ಮರೆತಿರುವರು.

ಬಕಾರ ಸಕಾರ ವಕಾರಗಳು ವೀರಶೈವರಿಗಷ್ಟೆ ಏಕೆ ಮತಾಂತರದವರಿಗೂ ಜಾಪ್ಯ ಮಂತ್ರ ಬೀಜಗಳಿರುತ್ತವೆ. ವಾದಿಗಳು ಆವ ಮತದ ಮಂತ್ರ ಶಾಸ್ತ್ರಗಳನ್ನೂ ನೋಡಿದವರಲ್ಲ. ನೋಡಬೇಕಾದ ಸಂದರ್ಭವೂ ಅವರಿಗೆ ಬಂದಿಲ್ಲ. ಯಥಾರ್ಥವನ್ನು ತಿಳಿದುಕೊಳ್ಳಬೇಕೆಂಬ ಲಾಲಸೆಯುಂಟಾದರಷ್ಟೆ ವಿಷಯಶೋಧವು ! ದ್ವೇಷಪೂರಿತವಾದ ಹೃದಯರಾಗಿ ತಮ್ಮ ಅಜ್ಞಾನವನ್ನೆ ಜ್ಞಾನವೆಂದು ನಟಿಸಿ. ನಿಂದಾಪ್ರವೃತ್ತರಾಗಿರುವರು. ಇರಲಿ ಮತಾಂತರದವರ ಗ್ರಂಥಗಳನ್ನು ನೋಡುವ ಈ ಬೀಜಗಳನ್ನು ಕಾಮಧೇನು ತಂತ್ರ ಮೊದಲಾದವುಗಳಲ್ಲಿ ಹೇಳಿರುವರು. ನೋಡು:- ಬಕಾರಂ ಶೃಣು ಚಾರ್ವಂಗಿ ಚತುರ್ವರ್ಗ ಪ್ರದಾಯಕಂ! ಶರಚ್ಚಂದ್ರ ಪ್ರತೀಕಾಶಂ ಪಂಚದೇವಮಯಂ ಸದಾ! ಪಂಚಪ್ರಾಣ

ಶಾನ್ತಕಂ ವರ್ಣಂ ತ್ರಿಬಿಂದುಸಹಿತಂ ಸದಾ ॥ ಸಕಾರಂ ಶೃಣು ಚಾರ್ವಂಗಿ ಶಕ್ತಿಬೀಜಂ ಪರಾತ್ಪರಂ ಕೋಟಿವಿದ್ಯುಲ್ಲತಾಕಾರಂ ಕುಂಡಲೀತ್ರಯ ಸಂಯುತಂ । ಪಂಚದೇವಮಯಂದೇವಿ ಪಂಚಪ್ರಾಣಮಯಂ ಸದಾ । ರಜಃ ಸತ್ವತಮೋಯುಕ್ತಂ ತ್ರಿಬಿಂದುಸಹಿತಂ ಸದಾ ॥ ವಕಾರಂ ಚಂಚಲಾಪಾಂಗಿ ಕುಂಡಲೀ ಮೋಕ್ಷಮವ್ಯಯಂ । ಪಂಚಪ್ರಾಣಮಯಂ ವರ್ಣಂತ್ರಿಶಕ್ತಿಸಹಿತಂ ಸದಾ । ತ್ರಿಬಿಂದುಸಹಿತಂ ವರ್ಣಮಾತ್ಮಾದಿತತ್ವಸಂಯುತಂ । ಪಂಚದೇವಮಯಂ ವರ್ಣಂ ಪೀತವಿದ್ಯುಲ್ಲತಾಮಯಂ । ಚತುರ್ವರ್ಗಪ್ರದಂವರ್ಣಂ । ಸರ್ವಸಿದ್ಧಿಪ್ರದಾಯಕಂ ॥ ತ್ರಿಶಕ್ತಿಸಹಿತಂದೇವಿ ತ್ರಿಬಿಂದುಸಹಿತಂ ಸದಾ ॥ "ಬಕಾರಾಯ ಬಕಾರಾಖ್ಯ ಮಹಾಬೀಜೈಕವಾಸಿನಾಂ। ಬಂಧನಾಗರನಾಶೈಕ ಹೇತವೇವೇಧಸೇನಮಃ"॥ ಸೂ. ೪-೪೯ ಅಧ್ಯಾಯ ೪೫ ಶ್ಲೋಕ. ಈ ಪ್ರಮಾಣದಿಂದ ಬಕಾರವು ಮಹಾ ಬೀಜಾಕ್ಷರವು ಅದನ್ನು ಜಪಿಸುವರು ಬಂಧಮುಕ್ತರಹರೆಂತಲು ತಿಳಿಯುತ್ತದೆ. ಅದರಂತೆಯೆ ಸಕಾರ ವಿಷಯಕವಾಗಿ ಸಕಾರಾಯ ಸಶಬ್ದಾರ್ಥಸ್ವರೂಪಾಯ ಸನಾತ್ಮನೇ । ಸಾಕ್ಷಿಣೇಽಸಾಕ್ಷಿರೂಪಾಣಾಂ । ನಮಃ ಸಾಧೂಪಕಾರಿಣೇ ॥ ವಕಾರಾಯ ವರಿಷ್ಠಾಯ ವಾಸುದೇವಾದಿಹೇತವೇ। ವಾಂಛಾವಾಗುರವಿಚಿತ್ತಿಹೇತು ಭೂತಾಯ ವೈನಮಃ ॥ ಎಂಬ ಅದೇ ಸಂಹಿತೆಯ ಅದೇ ಅಧ್ಯಾಯಗತ ಶ್ಲೋಕಗಳಿಂದ ಸಕಾರ ವಕಾರಗಳು ಶೈವರಿಗೆ ಜಾಪ್ಯಮಂತ್ರಗಳಾಗಿರುತ್ತವೆಂದು ಅರಿಕೆಯಾಗುತ್ತದೆ. ವರ್ಣಮಾಲಿಕೆಯೊಳಗಿನ ಪ್ರತ್ಯೇಕಾಕ್ಷರವು ಮಂತ್ರರೂಪವಾಗಿರುತ್ತದೆಂದು ಕಾಮಧೇನು ತಂತ್ರ ಸೂತಸಂಹಿತೆಗಳಿಂದ ಕಂಡು ಬರುವುದಲ್ಲದೆ, ವೀರಶೈವರಿಗೆ ಮಾನ್ಯವಾದ ವಾತುಲಾಗಮ ವರ್ಣಭೇದ ಪಟಲದಿಂದಲು ತಿಳಿಯುತ್ತದೆ. ಆದುದರಿಂದ ಬಕಾರ ಸಕಾರ ವಕಾರಗಳನ್ನು ಪ್ರತ್ಯೇಕವಾಗಿ ಬಿಂದುಯುತವಾಗಿ ವೀರಶೈವರು ಜಪಿಸುತ್ತಿದ್ದರೆಂಬುದಕ್ಕೆ ಆವ ಸಂದೇಹವೂ ಇರಲಾರದು. ನೋಡು.—ಬಕಾರಸ್ತು ತ್ರಿಮೂರ್ತಿಃ ಸ್ಯಾತ್ಪೀತಂ ಸರ್ವಾರ್ಥಸಿದ್ಧಿದಂ ॥ ಸಕಾರಂ ಶಕ್ತಿರೂಪಂ ಸ್ಯಾದ್ರಕ್ತಂ ಸ್ಥಿತಿಕರಂ ಭವೇತ್ । ವಾರುಣಂ ಸ್ಯಾದ್ವಕಾರಂತು ಶುಕ್ಲಾಭಂ ರೋಗನಾಶನಂ" ವಾತುಲಾಗಮ ವರ್ಣಭೇದ ಪಟಲ.

ಶಬ್ದಸಾಮರ್ಥ್ಯವು ಅನಂತವಾದುದು. ವರ್ಣಗಳು ಆಯಾ ವ್ಯುತ್ಪತ್ತಿಯಿಂದ ಆಯಾ ಅರ್ಥಗಳನ್ನು ಹೇಳುತ್ತವೆ. ಆದರಿಂದಲೆ ನಿರುಕ್ತಕಾರರು "ವೇದಶಬ್ದಾ ಯಥಾ ಪ್ರಜ್ಞಂ ಪುರುಷಾಣಾ ಮರ್ಥಾಭಿಧಾನೇಷು ವಿಪರಿಣಮಮಾನಾಃ ಸರ್ವತೋಮುಖಾ ಅನೇಕಾರ್ಥಾನ್ ಬ್ರುವಂತಿ" ವೇದಶಬ್ದಗಳು ಅವರವರ ಬುದ್ಧಿಬಲದಂತೆ ಅನೇಕಾರ್ಥಗಳನ್ನು ಕೊಡುತ್ತಿರುವುವಾಗಿ ಸರ್ವತೋಮುಖಿಗಳಾಗಿರುವುವು ಎಂದು ಪ್ರತಿಪಾದಿಸುವರು. ಅನೇಕಾರ್ಥಗಳನ್ನು ಅನ್ನುವುದರಿಂದ ಅನವಸ್ಥಾದೋಷವು ಬಂದಿತೆನಲಾಗದು. ಅನೇಕ ನಿಮಿತ್ತ್ಯಗಳಿಂದ ಒಂದು ಅರ್ಥವನ್ನು ಹೇಳುವುವೆಂಬರ್ಥವು. ಆದುದರಿಂದ ವಾತುಲೋಕ್ತಿಯಂತೆ ಬಕಾರವು ತ್ರಿಮೂರ್ತಿಗಳನ್ನು ಹೇಳುತ್ತದೆಂಬುದರ ಸಾರವು. "ಗುರುಬ್ರಹ್ಮಾಗುರುರ್ವಿಷ್ಣುರ್ಗುರುರ್ದೇವೋ ಮಹೇಶ್ವರಃ" ಎಂಬುಕ್ತಿಯಿಂದ ಬಕಾರವು ಗುರುಮೂರ್ತಿಯೆಂತಲೂ "ಸಕಾರಂ ಶಕ್ತಿರೂಪಸ್ಯಾತ್" ಎಂಬುದರ ಇಂಗಿತವು. ಅದೇ ವಾತುಲದಲ್ಲಿ "ಸಾಶಕ್ತಿರ್ದ್ವಿವಿಧಾ ಭೂತಾಸ್ವಸ್ವಾತಂತ್ರ್ಯಬಲೇನತು। ಸಮಾನಧರ್ಮಿಣೀತ್ವೇನವಿಭಕ್ತಾಭಕ್ತವತ್ಸಲಾ। ಲಿಂಗಸ್ಥಲಾಶ್ರಯಾಕಾಚಿತಾ ಕ್ವಚಿದಂಗಸ್ಥಲಾಶ್ರಮಾ। ಲಿಂಗಸ್ಥಲಾಶ್ರಯಾ ಶಕ್ತಿಃ ಕಲಾರೂಪಾಪ್ರಕೀರ್ತಿತಾ ॥ ಎಂತಲೂ "ತಸ್ಮಾತ್ಸವಾಸನಾಶಕ್ತಿರ್ಭಕ್ತಿರ್ನಿರ್ವಾಸನಾಮತಾ ॥ ಎಂದಿಂತಿರುವ ಅನುಭವಸೂತ್ರೋದಾಹೃತ ಶ್ಲೋಕಗಳಿಂದ ಶಕ್ತಿಪದದಿಂದ ಲಕ್ಷಿತವಾದ ಲಿಂಗವೆಂದೂ, "ವಾರುಣಂ ಸ್ಯಾದ್ವಕಾರಂತು" ಎಂಬುದರ ಭಾವವು. "ಆಪೋಮಯಃ ಪ್ರಾಣಃ ಎಂಬಶ್ರುತಿಯಿಂದ ಪಾದೋದಕ ಪುಷ್ಟವಾದ ಭಕ್ತನ ಪ್ರಾಣವನ್ನು ತದ್ದ್ವಾರಾ ಆ ಪ್ರಾಣತತ್ವಕ್ಕೆ ಪ್ರಾಣಲಿಂಗ ಪ್ರಕೃತಿಕೇತೇ ಚೋವಾಯುಮಯೇತಥಾ। ಶಿವಲಿಂಗ ಚರಾಭಿಖ್ಯೇ ಲಿಂಗೇಪ್ಯೇವರವರ್ಣವಿ"॥ ಎಲಾಶ್ರೇಷ್ಠವರ್ಣದವಳೇ ಶಿವಲಿಂಗ ಜಂಗಮಲಿಂಗಂಗಳೆರಡು ಅಗ್ನಿವಾಯುತತ್ವಗಳವು ಎಂಬೀ ಪ್ರಮಾಣದಿಂದ ಅಧಿಪತಿಯಾದ ಜಂಗಮವನ್ನು ಬೋಧಿಸುತ್ತದೆ.

ಮಂತ್ರ ವಿವರವು ಆಗಮಗಳಲ್ಲಿಯೆ ಬರೆದುದೆಯಲ್ಲದೆ ವೇದಭಾಗದಲ್ಲಿ ವಿಶೇಷವಾಗಿ ಕಂಡುಬರುವುದಿಲ್ಲ. ಶುದ್ಧ ಮೂಲತತ್ವ ಆದಿ

ಆತ್ಮನೆಂಬ ಪ್ರಸಾದಮಂತ್ರಗಳಾಗಲಿ, ಹೃದಯಾದ್ಯಂಗಮಂತ್ರಗಳಾಗಲಿ, ವೇದಭಾಗದಲ್ಲಿರುವುದಿಲ್ಲ. ಆಗಮಗಳಲ್ಲಿಯೂ ತದನುಸಾರಿ ಪುರಾಣಗಳಲ್ಲಿಯೂ ದೊರೆಯುತ್ತವೆ. ವೇದದಲ್ಲಿ ಸಿಗುವ ಪಂಚಾಕ್ಷರ ಷಡಕ್ಷರ ಪಂಚಬ್ರಹ್ಮ ಮೊದಲಾವ ಮಂತ್ರಗಳ ಉಧ್ಧಾರಾದಿ ವಿಧಾನವೂ, ನ್ಯಾಸಕ್ರಮವೂ, ಜಪಪ್ರಕಾರವೂ ಆಗಮಗಳಲ್ಲಿಯೆ ಉಕ್ತವಾಗಿರುತ್ತವೆ. ಬ. ಸ. ವಕಾರಗಳ ಉಲ್ಲೇಖವನ್ನು ಮತಾಂತರಗ್ರಂಥಗಳಲ್ಲಿಯೂ ಮತಗ್ರಂಥಗಳಲ್ಲಿಯೂ ತೋರಿಸಿದೆನು. ಬ, ಸ. ವಕಾರಗಳು ಜಪದಿಂದ ಧ್ಯಾನಮಾಡುವ ಮೂರ್ತಿಯೆ ಅನಾದಿ ವೃಷಭನಾಗಿದ್ದು ಅವನೇ ಅವತರಿಸಿದುದನ್ನು ಜನಕ್ಕೆ ತಿಳುಹುದಕ್ಕಾಗಿ ಶ್ರೀ ಸಂಗಮನಾಥನು ಅವನಿಗೆ ಬಸವನೆಂಬ ನಾಮವನ್ನಿಟ್ಟನು. ಈ ನಾಮವು ವೃಷಭನೆಂಬ ಶಬ್ದಕ್ಕೆ ತದ್ಭವ ರೂಪವೂ ಆಗುತ್ತದೆ. ಆದದರಿಂದ ಸಂಸ್ಕೃತರೂಪದಿಂದ ಗುರುಲಿಂಗಜಂಗಮಾತ್ಮಕವಾದ ಅನಾದಿ ಭಕ್ತಸ್ವರೂಪನೂ ದೇಶ್ಯಶಬ್ದರೂಪದಿಂದ ಆ ಗುರುಲಿಂಗಜಂಗಮಸ್ವರೂಪವನ್ನೊಳಕೊಂಡ ಅನಾದಿಭಕ್ತವೃಷಭೇಶನವತಾರನೂದ ಆ ಶಿಶುವು ಜನಿಸಿರುವುದೆಂದು ಸೂಚಿಸಲಿಕ್ಕೆ ಶ್ರೀ ಸಂಗಮನು ಬಸವಾಭಿಧಾನವನ್ನಿಟ್ಟನು.

ಬಸವ ಶಬ್ದವು ಬ. ಸ. ವ ಎಂಬೀಬೀಜಮಂತ್ರಗಳಸಮುದಾಯ ರೂಪವಾದುದರಿಂದ ಸಂಸ್ಕೃತವೆಂದೆನ್ನುವಲ್ಲಿ ಸಂದೇಹವಿರಲಾರದು. ಈ ಮಂತ್ರವರ್ಣಗಳು ಮಾಂತ್ರಿಕಶಾಸ್ತ್ರದಲ್ಲಿ ಪ್ರಸಿದ್ಧವಿರುತ್ತವೆಂಬುದನ್ನೂ ತೋರಿಸಿದೆನು. ಅದರಿಂದ ಈ ವರ್ಣತ್ರಯವು ಪಂಚಾಕ್ಷರ ಮಂತ್ರದೊಡನೆ ಮಿಶ್ರವಾಗಿ ಜಪಿಸಲಿಕ್ಕೆ ಅಡ್ಡಿ ಇರಲಾರದು. ಪೂರ್ವಾಚಾರ್ಯರು ಇದನ್ನರಿತು " ಬಸವನಾಮಂ ಮಂತ್ರಪಟಲದಲಾಮ " ಎಂದಿಂತು ಕೊಂಡಾಡಿರುವರು. ದ್ವಾದಶಾಕ್ಷರ ಮಂತ್ರವು ಪ್ರಸಾದ ಪಂಚಾಕ್ಷರಿ ಮುಂತಾದ ಮಂತ್ರಗಳಂತೆ ಸಂಯುಕ್ತ ಮಂತ್ರವಾಗಿದೆ. ಈ ಸಂಯುಕ್ತ ಮಂತ್ರದ ಅವಯವಂಗಳು ಮಾಂತ್ರಶಾಸ್ತ್ರದಲ್ಲಿ ಪ್ರಸಿದ್ಧವಿರುವುದರಿಂದ ಸಮುದಾಯಿ ರೂಪವಾದ ಮಂತ್ರವು ಶಾಸ್ತ್ರಸಿದ್ಧವೆ ಆಗಿರುತ್ತದೆ.

ಓಂ ಹ್ರಾಂ ಓಂ ಹ್ರೀಂ ನಮಃಶಿವಾಯ ಓಂ ಹ್ರೂಂ ಓಂ ಹ್ರೈಂ ಓಂ ಹ್ರೌಂ ಆಂ ಊಂ ಮಾಂ ಓಂ ಹ್ರಃ ಬಂ ಸಂ ವಂ ಎಂಬುವೆ ಮಂತ್ರಗಳು. ಶುದ್ಧ ಗುರುಬಸವ, ಗುರುವಿನ ಗುರು ಬಸವ, ಸಿದ್ಧಗುರು ಬಸವ, ಪರಮ ಪರಾಪರ ಬಸವ, ಚರಕ್ಕೆ ಚರಾಚರ ಬಸವ, ಮಹಾಪ್ರಸಿದ್ಧ ಗುರು ಬಸವ, ಪವಿತ್ರಪಾವನ ಬಸವ, ಎಂಬಿವು. ಆಯಾ ಮಂತ್ರ ಧ್ಯೇಯ ಗುರು ಬಸವನ ಮೂರ್ತಿಗಳ ವಿವರಣವು. ಈ ವಿವರಣವು ಕನ್ನಡದಲ್ಲಿರುವುದರಿಂದ ಆವ ಹಾನಿಯೂ ಇರುವುದಿಲ್ಲ. ಬ. ವ. ಸ. ವಸಬ ಮೊದಲಾದ ರೂಪಗಳು ಪಂಚಾಕ್ಷರ ದಯವಾಶಿಮನದಂತೆ ಸಂಗತವಾಗುತ್ತದೆ. ಪರಮಪವಿತ್ರವಾದ ವಾತುಲಾಗಮದಲ್ಲಿ ಈ ಮಂತ್ರ ಬೀಜಗಳು ಉಪಲಭಿಸುತ್ತವೆ. ಆದುದರಿಂದ ಈ ಮಂತ್ರಬೀಜವನ್ನು ಬಿಡಬೇಕೆನ್ನುವನೇ ಪತಿತನು ಮಂತ್ರಕ್ಕಾವ ಹಾನಿಯೂ ಇರುವುದಿಲ್ಲ.

ಶ್ರೀಗಂಗಾಂಬಾ ಮಾತೆಯ ತಂದೆಯಾದ ಬಲದೇವನು ಶ್ರೀಬಸವೇಶನ ಸೋದರಮಾವನು. ಕನ್ನಡ ಬಸವಪುರಾಣವನ್ನು ಬರೆದ ದುರ್ಗದ ಗದ್ಧಜನತಾಹೃದ್ಭೀಮನಾದ ಭೀಮನು ೧೩೬೯ರಲ್ಲಿ ಬಾಳಿದನು. ಆತನು ಬಸವಪುರಾಣವನ್ನು "ಕೋವಿದರು ಕೇಳೊಳ್ಳಿತೆನಲುಡು ।. ದೇವನಿಧಿನಯನೇಂದು ಸಂಖ್ಯೆಗ । ಳೋವಿಶಕವರುಷಂಗಳಾಗಲು" ಎಂದ ಬಸವಪುರಾಣದ ಶಕಸಂಖ್ಯೆಯನ್ನು ೧೨೯೧ನೆಯದನ್ನು ಕೊಟ್ಟಿರುವುದಕ್ಕೆ ಸರಿಯಾದ ಕ್ರಿಸ್ತಾಬ್ದವು ೧೩೬೯ ಆಗುತ್ತದೆ. ಬಸವಪ್ರಭುವು ೧೧೬೦ ಕ್ರಿಸ್ತಾಬ್ದದಲ್ಲಿದ್ದನೆಂದು ಐತಿಹಾಸಿಕರು ಹೇಳುವರು. ಭೀಮನು ತನ್ನ ಗ್ರಂಥವನ್ನು ಪಾಲ್ಕುರಿಕೆ ಸೋಮೇಶನು ಆಂಧ್ರದಲ್ಲಿ ರಚಿಸಿದ ಗ್ರಂಥದಿಂದ ಬರೆದಿರುವನು ಈ ಕವಿಯು ೧೧೯೫ ನೇಯ ಕ್ರಿಸ್ತಾಬ್ದದಲ್ಲಿ ಬಾಳಿದನೆಂದು ಕರ್ಣಾಟಕ ಕವಿಚರಿತ್ರವು ಹೇಳುವುದು ಸಂಪುಟ ೧. ಪುಟ ೨೩. ಈ ಕವಿಯು ತಾನು ರಚಿಸಿದ ಬಸವಸ್ತುತಿರೂಪವಾದ ಪಂಚರತ್ನವನ್ನು "ಶ್ರೀ ಮತೇವೃಷಭೇಂದ್ರಾಯ ಸೋಮನಾಥೇನ ಧೀಮತಾ। ಪಂಚರತ್ನಮಿದಂದತ್ತಂ ಜ್ಞಾನವೈರಾಗ್ಯ ಭಕ್ತಿದಂ" ಎಂದಿಂತು ಅರ್ಪಿಸಿರುವುದರಿಂದ ಶ್ರೀ ಬಸವೇಶನನ್ನು ವಂದಿಸಬೇಕು.

ಆ ಕವಿಯು ಗ್ರಂಥಾಧಾರದಿಂದ ಬರೆದ ಕನ್ನಡ ಬಸವ ಪುರಾಣದಲ್ಲಿ "ಮೊದಲಾಂಬೆಯ ಸೋದರಂ ಶಿವ । ಪಾದಪಂಕಜಭಕ್ತಿಯುಕ್ತಂ। ಮೇದಿನೀಶ್ವರ ಬಿಜ್ಜಳನ ಭಂಡಾರಿ ಬಲದೇವಂ ॥ ಎಂದು ವರ್ಣಿಸಿರುವುದರಿಂದ ಬಲದೇವನು ಬಸವಣ್ಣನ ಸೋದರಮಾವನು. ಸಂಸ್ಕೃತ ಬಸವಪುರಾಣಕಾರನಾದರು "ತತಃ ಪ್ರಾತಃ ಸಮುತ್ಥಾಯ ಬಸವೇಶ್ವರ ಮಾತುಲಃ। ಭಾಗಿನೇಯಾಂತಿಕಂ ಗತ್ವಾ ಬಭಾಷೇ ವಿನಯಾನ್ವಿತಃ ॥" ಎಂದಿಂತಾಗಿ ಬಲದೇವನನ್ನು ಕುರಿತು ಬಸವೇಶನ ಸೋದರಮಾವನೆಂದು ಬರೆಯುತ್ತಾನೆ.

"ಶೈವೇ ವೀರತ್ವಮಾತ್ರೇಣ ವೀರಶೈವಂ ಮಹತ್ತರಂ" ಎಂಬ ಪಾರಮೇಶ್ವರೋಕ್ತಿಯಂತೆ ವೀರಶೈವನಾದರು ಶ್ರೀಬಸವೇಶನ ಉಪನಯವಾದುದಕ್ಕೆ ಮೊದಲು ಲಿಂಗಧಾರಿ ವೀರಶೈವನಿದ್ದನೆಂದು ಹೇಳಲಾಗುವುದಿಲ್ಲ. ಆದುದರಿಂದ ಶ್ರೀಗಂಗಾಂಬಾಮಾತೆಗೆ ಲಗ್ನಕಾಲದಲ್ಲಿಯೆ ಲಿಂಗಧಾರಣವಾದಿತೆಂಬುದು ಸಹಜವು. ಪ್ರಭುಲಿಂಗಲೀಲೆಯಲ್ಲಿ ಬಲದೇವನಿಗೆ ವೀರಶೈವನೆಂದುದು ಮೇಲುದಾಹರಿಸಿದ ಪಾರಮೇಶ್ವರವಾಕ್ಯದಂತೆಯಾಗಲಿ, "ವರ್ತಮಾನಸಾಮೀಪ್ಯೇ ವರ್ತಮಾನವದ್ವಾ" ಎಂಬ ವೈಯಾಕರಣ ಸೂತ್ರದಿಂದ ವರ್ತಮಾನ ಸಮೀಪ ಭವಿಷ್ಯತ್ತಿನ ಘದಲ್ಲಿ ವರ್ತಮಾನ ಪ್ರಯೋಗದಿಂದಾಗಲಿ ಇರುತ್ತದೆ. ಬಲದೇವನು ಮುಂದೆಯೆ ವೀರಶೈವ ಲಿಂಗಧಾರಿಯಾಗುವನಿದ್ದನು ಆದರಿಂದ ಆತನಿಗೆ ವೀರಶೈವನೆಂದು ಕವಿಯು ಅಂದಿರುವನು. "ವೀರಶೈವಾನ್ವಯೋತ್ತಮಃ" ಎಂಬ ವಿಶೇಷಣದಿಂದ ಬಲದೇವನ ವಂಶಕ್ಕೆ ವೀರಶೈವವೆನ್ನುವುದರಿಂದ ಎರಡನೆಯ ಅರ್ಥವು ಅಂದರೆ, ವರ್ತಮಾನಸಾಮೀಪ್ಯೇ ವರ್ತಮಾನವದ್ವಾ" ಎಂಬ ಸೂತ್ರತಾತ್ಪರ್ಯದಿಂದ ಹೇಳಿದರ್ಥವು ಸಂಗತವಾಗುವುದಿಲ್ಲೆಂದರೆ ಮೊದಲನೆಯ ಅರ್ಥದಿಂದಲೇ ಸಮಾಧಾನವನ್ನು ಹೋದು. ಆದಕ್ಕೂ ಒಪ್ಪದಿದ್ದರೆ, ಲಿಂಗಧಾರಣದಿಂದ ಬಲದೇವನ ಪೂರ್ವಜರೂ ಶುದ್ಧರಾದುದರಿಂದ ಆವನ ವಂಶಕ್ಕೆ ವೀರಶೈವವೆಂಬ ವಿಶೇಷಣವು ಸಾರ್ಥಕವೆಂದು ತಿಳಿ ಇದಕ್ಕೆ ಪ್ರಮಾಣವು. ಶಿವರಹಸ್ಯದಲ್ಲಿ। ಯ್ಕೈರ್ನ್ಯೋಸಿತ್ವಾಂಶ್ಚತಕಲ ಜಾತ್ಯಾಭಕಾನ್ಯತು ಶಂಕರಃ । ಯತಸ್ತ್ವ

ಶಿವಲಿಂಗೇನ ವಿಭೂಷಿತಹೃದಂಬುಜಃ ॥ ಅಜ್ಞಾನಾದಥವಾಜ್ಞಾನಾಚ್ಛಿ ವಲಿಂಗಂ ಬಿಭರ್ತಿಯಃ । ಶಿಖಾಯಾಂಬಾಹುಮೂಲೇವಾ ಕಂಠದೇಶೇ ಹೃ ದಂಬುಜೇ । ಹೃದಯೇಶ್ಲಾಘ್ಯಮುದಿತಂ ಶಿವಲಿಂಗಸ್ಯಧಾರಣಂ । ಅಂ ರ್ದಹರಮಧ್ಯೇಚ ಬಹಿರ್ಹೃದಯ ಮಧ್ಯತಃ ದೀಕ್ಷಾಕ್ರಮೇಣಧರ್ತ್ತ ಚೇತ್ತದ್ವಿಶೇಷಸಿದ್ಧಯೇಽಪ್ಯತಾಃ ॥ ಸಏವಧನ್ಯಃ ಪೂತಾತ್ಮಾಸಫಲಂ ತ ಸ್ಯಜೀವಿತಂ । ಪಿತಾಮಾತಾಸುತಃ ಪತ್ನೀಪೌತ್ರಃ ಪೌತ್ರೀಸುತಾಸ್ನು ಷಾ । ಕೃತಾರ್ಥಾಃ ಶಿವಸಂಬಂಧಾನುಕ್ತಿಂ ಯಾಂತ್ಯತಿದುರ್ಲಭಾಂ । ಈ ಪ್ರಮಾಣದಲ್ಲಿ ಲಿಂಗಧಾರಣ ಪ್ರಶಂಸೆಯನ್ನು ಮಾಡಿ ಲಿಂಗಧಾರಣ ಹೊಂದಿದಾತನ ಪೂರ್ವಜರೂ ಸದ್ಗತಿಯನ್ನು ಹೊಂದುತ್ತಾರೆಂಬುದು ಸ್ಪಷ್ಟವಾಗುತ್ತದೆ. ಆದುದರಿಂದ ಬಸವ ಪುರಾಣದಲ್ಲಿ ತದಾಶ್ರೀ ಸಂಗಮೇಶೋಽಪಿ ಬಲದೇವಸುತಾಂ ವಿಭುಃ । ಪಾರ್ವತೀಸಹಿತಃ ಶಂಭುಃ ಶಿವದೀಕ್ಷಾವತೀಂ ವ್ಯಧಾತ್ ಎಂದು ಶ್ರೀಗಂಗಾಂಬಾಮಾತೃವಿಗೆ ಲಗ್ನ ಕಾಲದಲ್ಲಿ ಲಿಂಗಧಾರಣವಾದಿತೆಂದು ಹೇಳಿದುದಕ್ಕೆ ಪ್ರಭುಲಿಂಗಲೀಲೆ ಯಿಂದ ವಿರೋಧವು ಬರುವುದಿಲ್ಲ. ಮತ್ತು ಅವುಗಳು ಒಂದಕ್ಕೊಂದು ವಿರೋಧವಿಲ್ಲ. ಅಲಿಂಗಿ ಕನ್ಯೆಯನ್ನು ಲಿಂಗಧಾರಣ ಪೂರ್ವಕವಾಗಿ ತ ಕೊಳ್ಳುವುದು ಯಥಾಶಾಸ್ತ್ರವು. ಶ್ರೀಮದ್ರೇವಣಸಿದ್ಧೇಶ ಮಹಾ ಗುರುವು ಲಿಂಗಧಾರಿಯಲ್ಲದ ಚಾಲುಕ್ಯಬಿಜ್ಜಳನ ಸುಕುಮಾರಿಯಾದ ಶ್ರೀಲಕ್ಷ್ಮಣಾದೇವಿಯನ್ನು ಪರಿಗ್ರಹಿಸಿದುದು ಇದಕ್ಕುದಾಹರಣವಾಗಿ ದೆ. ನೋಡು:- ಪೋದಪೆನ್ನಿನ್ನು ದೇಶಾಂತರಂ ಮಾಳ್ಪೆವೆಂ । ದಾದ ಯಾಂಬುಧಿ ಸಿದ್ಧಪತಿ ನಿರೂಪಿಸೆಕೇಳಿ । ಪಾದಮಂ ಕಟ್ಟಿಕೊಂಡರಸನ ನ್ನಾತ್ಮಜೆಸುಲಕ್ಷ್ಮಣೆಯ ಮದುವೆಯಾಗಿ ॥ ಮಾದೇವನಗಣ ಗಳೊಳೆನ ಗೊಡೆಯನಾಗಿ ಚೆ । ಲ್ವಾದಿಸುಮಗ್ರ ಸಂಪದಕಧಿಪನಾಗಿ ಸಂ । ಪಾದಿ ಪುದುಕೃಪೆಯನೆನೆ ಪಾಲಿಸಿದನಾ ಬಿನ್ನಪವನು ಶಿವಯೋಗೀಂದ್ರನು ರೇ. ಸ. ೮—೨೪

ಬಲದೇವನು ಬಸವನ ಸೋದರಮಾವನಾದುದರಿಂದ ಭಿನ್ನಗೋ ತ್ರದವನಿದ್ದನು [illegible] ಬಸ

ವನ ಲಗ್ನವಾಯಿತೆಂದು ಅಪೇಕ್ಷಿಸುವೆಯಲ್ಲ, ಕೇಳು:—ಗುರುಕಲಶವನ್ನು ಮಧ್ಯದಲ್ಲಿಡುವುದು ದೀಕ್ಷಾಪ್ರಕರಣದಲ್ಲಲ್ಲದೆ ಉಳಿದ ಸಂಸ್ಕಾರಗಳಲ್ಲಿ ಪ್ರಸಕ್ತವಾಗುವುದಿಲ್ಲ. ಅಲ್ಲಿಯಾದರು ಗುರುಕಲಶವೆಂದರೆ, ಗುರುವು ಶಿಷ್ಯನನ್ನು ಅಭಿಷೇಕಿಸುವ ಕಲಶವಲ್ಲದೆ ಗುರುವನ್ನು ಆಹ್ವಾನಿಸುವ ಕಲಶವಲ್ಲ. ಕಲಶಗಳಲ್ಲಿ ಗುರುವನ್ನೂ ಋತ್ವಿಕ್ಕುಗಳನ್ನೂ ಆಹ್ವಾನಿಸಬೇಕೆಂಬ ಅಬದ್ಧ ಪ್ರಲಾಪವನ್ನು ಕುಲವಾದಿಗಳ ಕೃತ್ರಿಮ ಗ್ರಂಥವಾದ ಪಂಚಾಚಾರ್ಯೋತ್ಪತ್ತಿ ಪ್ರಕರಣವೂ ತದನುಸಾರಿಗಳಾದ ಅರ್ವಾಚೀನ ಗ್ರಂಥಗಳೂ ಹಬ್ಬಿಸಿ, ಅಶಾಸ್ತ್ರೀಯವಾಗಿ ಈ ಪ್ರಘಾತವನ್ನು ಕೆಡವಿರುತ್ತವೆ. ಪಂಚಾಚಾರ್ಯೋತ್ಪತ್ತಿಯು ಸುಪ್ರಭೇದ ಮತ್ತು ಪಾಶುಪತಾಗಮಗಳು ಸುಪ್ರಭೇಧ ಪ್ರಭಂಜನದಲ್ಲಿ ಮುಂಚಾಪಾಲಾಗಿರುವುದರಿಂದ ಈ ಪ್ರಘಾತವು ಶಾಸ್ತ್ರೀಯವೆಂದು ಆರೂ ವಾದಿಸಲಾರರು. ಅದು ಎಂತಾದರಿರಲಿ, ವೈವಾಹಿಕ ಕರ್ಮದಲ್ಲಿ ವೇದಿಯಮೇಲೆ ಕುಂಭಗಳನ್ನಿಡುವ ಪದ್ಧತಿಯು ಸಕಲ ವೈದಿಕರಿಗು ಸರ್ವಸಾಮಾನ್ಯವಾದುದು. "ಚಂದ್ರಕಾಂತಶಿಲಾರಮ್ಯ ವೇದಿಕಾಯಾಂ ಯಥಾವಿಧಿ ಕೃತ್ವಾರುದ್ರಾವಾಹನಾನಿ ಬಲದೇವನಧೀಮತಾ । ಬೋಧಿತೋಗುರುವರ್ಯಸ್ತು ಸದ್ಯೋಜಾತಾದಿಕಾನ್ಮುದಾ । ಕಲಶಾಂಭಃ ಸ್ಥಾಪಯತ್ಯತ್ರ ಮಂತ್ರೈರ್ವೈದಿಕ ಲೌಕಿಕೈಃ ॥" ಸುಮತಿ ಬಲದೇವ ಮಂತ್ರಿಯು ಚಂದ್ರಕಾಂತಶೀಲೆಯ ವೇದಿಕೆಯಲ್ಲಿ ರುದ್ರಾವಾಹನವನ್ನು ಮಾಡಿ ಶ್ರೀ ಗುರುಸಂಗಮೇಶನಿಗೆ ತಿಳುಹಿದನು. ಆಗ ಗುರುವರ್ಯನು ಆನಂದದಿಂದ ಸದ್ಯೋಜಾತಾದಿ ವೈದಿಕಲೌಕಿಕ ಮಂತ್ರಗಳಿಂದ ಕಲಶಾಂಬುವನು ನೆಲಿಸಿದನು. ಎಂದು ಹೇಳಿದ ಕಲಶಸ್ಥಾಪನದಂತೆ ಸೀತಾಪರಿಣಯದಲ್ಲಿಯೂ ಕಲಶಸ್ಥಾಪನೆಯನ್ನು ನೋಡು. ಪ್ರಪಾಮಧ್ಯೇತು ವಿಧಿವದ್ವೇದಿಂ ಕೃತ್ವಾ ಮಹಾತಪಾಃ । ಅಲಂಚಕಾರತಾಂ ವೇದಿಂ ಗಂಧಪುಷ್ಪೈಃ ಸಮಂತತಃ ॥ ಸುವರ್ಣಪಾಲಿಕಾಭಿಶ್ಚ ಛಿದ್ರಕುಂಭೈಶ್ಚ ಸಾಂಕುರೈಃ— ರಾಮಾಯಣ ಬಾಲಕಾಂಡ ೭೩ ಸರ್ಗ ೨೦ ೨೧. ಮಹಾ ತಪಸ್ವಿಯಾದ ವಶಿಷ್ಠನು ಮಂಟಪ ಮಧ್ಯದಲ್ಲಿ ಜಗುಲಿಯನ್ನು ಮಾಡಿ ಅದನ್ನು ಸುತ್ತಲು ಗಂಧಪುಷ್ಪಗಳಿಂದಲು ಸುವರ್ಣ

ಪಾಲಿಕೆಗಳಿಂದಲು ಅಂಕುರಗಳನ್ನುಳ್ಳ ಸಂಣ ಬಿಂದಿಗೆಗಳಿಂದಲು ಅಲಂಕರಿಸಿದನು. ತಸ್ಮಾತ್ ಗುರುವಿನ ಆ ಹ್ವಾನವನ್ನು ಆವಕಲಶದಲ್ಲಿಯು ಮಾಡುವ ಆವಶ್ಯಕವಿದ್ದಿಲ್ಲ. ಪಂಚಾಚಾರ್ಯರಿಗೂ ಗುರುವಾದ ವೇದ ವೇದಾಂತಾದಿಗಳಿಗೆ ತರ್ಕ್ಯನಾದ ಪರಶಿವ ಮೂರ್ತಿಯೆ ಸಂಗಮನಾಗಿ ಸನ್ನಿಧಿಯಲ್ಲಿದ್ದು ಬ್ರಹ್ಮಾದಿಗಳಿಗೂ ಲಭಿಸದ ಗುರುಕೃಪೆಯನ್ನು ಬಸವನ ವೈವಾಹಿಕದಲ್ಲಿ ಮಾಡುತ್ತಿರಲು ಅನ್ಯ ಗುರ್ವಾ ಹ್ವಾನವು ದೂರಾಪಾಸ್ತವು.

ಶರಣನಿಂದಾ ಕಲಂಕ ದೂಷಿತರಾದ ಪಾಪಿಷ್ಟರು. ಶ್ರೀಬಸವನ ದೀಕ್ಷಾಗುರುವು ಸಂಗಮನಾಥನೊ ಅಲ್ಲಮನೊ ಎಂದು ಪ್ರಶ್ನೆಮಾಡುವಲ್ಲಿ ಪ್ರಭುವರನು ಬಸವನಿಗೆ ದೀಕ್ಷಾಕಾಲದಲ್ಲಿ ಉಪದೇಶಿಸತಕ್ಕದನ್ನೆಲ್ಲ ಉಪದೇಶಿಸಿರುವನು, ಆದುದರಿಂದ ಬಸವನ ದೀಕ್ಷಾಗುರುವು ಸಂಗಮನೊ ಪ್ರಭುವೊ ಎಂದು ಕೇಳಿರುವರು. ಇದಕ್ಕೆ ಉತ್ತರವನ್ನೀಯುವ ಪೂರ್ವದಲ್ಲಿ ಪಾಪಾತ್ಮರು ಆ ಪ್ರಭುವಿನ ವಿಷಯದಲ್ಲಿ ಮಾಡುವ ಕುತ್ಸಿತಟೀಕೆಗಳು ಅವರೀ ಪ್ರಶ್ನದಿಂದ ಮುಂಣುಪಾಲಾಗುವುದನ್ನು ನೋಡಿರಿ. ಕಾಶೀನಾಥಶಾಸ್ತ್ರಿಯು ಶುಭೋದಯದಲ್ಲಿ ಬ್ರಾಹ್ಮಣ ವೇಷದಿಂದ ಬರೆದ ಲೇಖದಲ್ಲಿಯೂ ಹಂಪಿಗೆಯ ಶಾಂತಪ್ಪನ ಹೆಸರಿನಿಂದ ಪ್ರಕಟಿಸಿದ ಈ ದುರಾಲಾಪದಲ್ಲಿಯೂ ಶ್ರೀಪ್ರಭುವು ಅಪೇಯ ಪಾನಾದಿಗಳನ್ನು ಮಾಡುತ್ತಿದ್ದನೆಂತಲೂ, ಬಿಜ್ಜಳನ ರಾಜ್ಯಾಪಹರಣಕ್ಕೆ ಅನುಕೂಲವಾದ ಕುತಂತ್ರಗಳಲ್ಲಿ ನಿಷ್ಣಾತನಿದ್ದನೆಂತಲು ಅನ್ನುವನಲ್ಲವೆ? ಇಂತಹ ದುರಾಚಾರಿಗೆ ಇಂತಹ ಕುತಂತ್ರಪರನಿಗೆ ವೀರಶೈವ ದೀಕ್ಷಾಗುರುವು ಹೇಳುವ ಸಂದರ್ಭಗಳೆಲ್ಲ ಹೇಗೆ ತಿಳಿದುವು! ಒಂದು ವೇಳೆ ಗ್ರಂಥಕರ್ತನು ಈ ವಿಧಾನಗಳನ್ನು ಬರೆದಿರುವನು ಪ್ರಭುವು ಬೋಧಿಸಲು ಸಮರ್ಥನಿದ್ದಿಲ್ಲವೆಂದು ಬಡಬಡಿಸಿದರೆ, ವೀರಶೈವಶಾಸ್ತ್ರ ಪಾರಂಗತನಾದ ಕವಿಯು ದುರಾಚಾರಿಯೂ ದುರ್ಮಾರ್ಗಿಯೂ ಆದ ಪ್ರಭುವನ್ನೂ ಬಸವನನ್ನು ಉಳಿದ ಶರಣರನ್ನೂ ಏಕೆ ಕೊಂಡಾಡಿದನು! ಎಂಬಿದರ ವಿವರವನ್ನು ಕಾಶೀನಾಥ ಶಾಸ್ತ್ರಿಯು ಹೇಳಬಲ್ಲನೊ? ಇರಲಿ ಪ್ರಕೃತವನ್ನನುಸರಿಸುವ:—

ಗುರುಜಂಗಮವೆಂಬೆರಡು ಪದಾರ್ಥಗಳಲ್ಲ. ಗುರುಲಿಂಗ ಜಂಗಮವೆಂಬ ತ್ರಿವಿಧವು ಒಂದೆ ವಸ್ತುವಾಗಿದೆ. ಶ್ರೀ ಸಂಗಮನಾಥನು ದೀಕ್ಷಾಗುರುವು ಶ್ರೀಪ್ರಭುದೇವನು. ದೀಕ್ಷಾಗುರುವಿನೊಡನೆ ಸ್ವರೂಪಭೇದವಿಲ್ಲದ ನಿರಂಜನಜಂಗಮ ವಸ್ತುವು. ಗುರುವಿನ ಕಾರ್ಯವು ಅರ್ಥಾತ್ ಗುರುರೂಪಧಾರಿ ಪರಶಿವಕಾರ್ಯವು ತನುತ್ರಯದಲ್ಲಿ ಲಿಂಗಸಂಬಂಧವು. ಜಂಗಮರೂಪ ಶಿವಕಾರ್ಯವು ಗುರುದತ್ತ ಇಷ್ಟ ಪ್ರಾಣಭಾವಲಿಂಗಗಳ ಸ್ವರೂಪಬೋಧವು. ಈ ಕಾರ್ಯಗಳು ಒಂದಕ್ಕೊಂದು ಭಿನ್ನವಾದವುಗಳಲ್ಲ ಅಂದರೆ ವಿಜಾತೀಯವಾದವುಗಳಲ್ಲ. ದೀಕ್ಷಾಗುರುವಿನಿಂದ ಬಿತ್ತಿದ ಬಿಜದಿಂದ ಮೊಳೆತ ಸಸ್ಯವನ್ನು ಜಂಗಮವು ತನ್ನ ಬೋಧಾಮೃತ ಧಾರೆಯಿಂದ ವೃದ್ಧಿಗೆಯ್ಯುವನು. ಗುರುದತ್ತ ಲಿಂಗಸಂಬಂಧದ ಉತ್ತರರೂಪವೆ ಜಂಗಮವು ಬೋಧಿಸುವ ಸ್ವರೂಪಜ್ಞಾನವಾಗಿದೆ. ಇಂದು ಒಂದಾನೊಂದು ಬೀಜವನ್ನು ಬಿತ್ತಲು ಮೂಡಿದ ಮೊಳಕೆಯೂ ಸ್ವಲ್ಪಕಾಲದಲ್ಲಿ ನಮ್ಮ ದೃಗ್ಗೋಚರವಾಗುವುದು. ಅದು ದೊಡ್ಡದಾಗುತ್ತ ನಡೆಯಲು ಸ್ಕಂಧಶಾಖಾದಿಗಳು ಮೊದಲು ಎಳೆಯವಿದ್ದುವು ಈಗ ದೊಡ್ಡವಾಗಿ ತೋರುವುವು. ಅಂದಿನ ಮೊಳಕೆಯು ಇಂದಿ ವೃಕ್ಷಕ್ಕೆ ಬೇರೆಯೆಂದು ಬಗೆಯುವ ಹೆಗ್ಗನು ಆಶ್ಚರ್ಯಚಕಿತನಾಗುವನು. ಇದೇನು! ನಾನಂದು ನೋಡಿದ ಶಾಖಾದಿಗಳು ಆ ಮೊಳಕೆಯಿಲ್ಲದ ಈ ವೃಕ್ಷದಲ್ಲಿ ತೋರುತ್ತಿವೆ! ಎಂದು ಆಕ್ಷೇಪಿಸುವನು. ಅದರಂತೆಯೆ ಇಲ್ಲಿ ಪ್ರಭೂಪದೇಶದಲ್ಲಿ ಕಂಡು ಬರುವ ದೀಕ್ಷಾವಿಧಾನಕ್ಕೆ ಸಂಬಂಧಿಸಿದ ಮಾತುಗಳಿಗೆ ವಾದಿಗಳ ಆಕ್ಷೇಪವು. ಗುರುಜಂಗಮ ಸ್ವರೂಪದಿಂದ ಆಗುವ ದೀಕ್ಷೆಯೂ ಬೋಧವೂ ಒಂದೆಯಾದುದರಿಂದಲೆ, ಶ್ರೀಬಸವನು ದರ್ಶನಪ್ರಸ್ತಾವದಲ್ಲಿ ಪ್ರಭುವನ್ನು ಕುರಿತು. "ಭವರೋಗ ವೈದ್ಯನೆಂದು ನಂಬಿದೆನಾನು ಒಂದಿಗೆ ಕರುಣಿಸಯ್ಯ ಭಕ್ತಫಲದಾಯಕ ನೀನು ಒಂದಿಗೆ ಕರುಣಿಸಯ್ಯ ಜಯ ಜಯ ಶ್ರೀಮಹಾದೇವ ಎನುತಿರ್ದನು. ಕೂಡಲಸಂಗಮದೇವಯ್ಯ ನಿಂಮ ಶ್ರೀಪಾದಕ್ಕೆ ನಮೋ, ನಮಃ ಎನುತಿರ್ದನು". ಪಂಚಮ ಸಂಪಾದನೆ ೬೪ ಎಂಬೀ ವಚನದಿಂದ ಸಂಬೋಧಿಸಿರುವನು. ಸದ್ಗುರುವಿನಿಂದ ಭಕ್ತಿಮಾರ್ಗವು ದೊರೆಯಿತು.

ಆ ಭಕ್ತಿಮಾರ್ಗಕ್ಕೆ ಅವಶ್ಯಕವಾದ ಪೂಜಾಜಪಾದಿ ಕ್ರಿಯೆಗಳೂ ಸಾಧಿಸಿದುವು ಆದರೆ ಲಿಂಗಾಂಗ ತತ್ವಗಳ ಸ್ವರೂಪ ಸಂಬಂಧ ಸಕೀಲಗಳನ್ನು ಆ ಗುರುವೆ ಜಂಗಮವಾದ ಪರಶಿವನಿಂದ ತಿಳಿಯಬೇಕಾಗಿತ್ತು. ಹಾಗಾದರೆ ಗುರುಮೂರ್ತಿಧರನಾದ ಸಂಗಮೇಶನಿಂದಲೆ ಈ ಕಾರ್ಯವಾಗಬಹುದಿತ್ತಲ್ಲ. ಪ್ರಭುವೆಂಬ ಜಂಗಮ ಮೂರ್ತಿಯು ಏತಕ್ಕೆ? ಕೇಳು:- ಲಿಂಗಸಂಬಂಧವನ್ನು ಮಾಡುವಾಗ ತನುತ್ರಯದಲ್ಲಿರುವ ಮಲತ್ರಯಗಳು ಹೋಗಿ ಅವುಗಳಲ್ಲಿ ಲಿಂಗತ್ರಯ ಸಂಬಂಧವಾದಿತು. ಇಲ್ಲಿಗೊಂದು ಸಂಸ್ಕಾರ ವಶೇಷವು. ಲಿಂಗಾನುಭವವನ್ನು ಗುರುಮೂರ್ತಿಯಾಗಿ ದೀಕ್ಷೆ ಮಾಡಿದ ಶಿವನೆ ಜಂಗಮ ಮೂರ್ತಿಯಾಗಿ ಮಾಡುವನು. ಸೂರ್ಯನೊಬ್ಬನೆ ಸಸ್ಯಾದಿಗಳ ಅಂಕುರ. ವೃದ್ಧಿ ಫಲಗಳಿಗೆ ಹೇತುವು. ಒಂದು ನಕ್ಷತ್ರಸ್ಥಿತನಾಗಿ ಬಿತ್ತಿಗೆಗೆ ಕಾರಣನಾಗುವನು. ಮತ್ತೊಂದು ನಕ್ಷತ್ರಸ್ಥಿತನಾಗಿ ಅಂಕುರೋತ್ಪತ್ತಿಗನುಕೂಲವಾದ ವೃಷ್ಟಿಗರೆಯುವನು. ಇನ್ನೊಂದು ನಕ್ಷತ್ರಸ್ಥಿತನಾಗಿ ಕುಸುಮೋದ್ಭವಕಾರಣನಾಗುವನು. ಬೇರೊಂದು ನಕ್ಷತ್ರಗತನಾಗಿ ಧಾನ್ಯೋತ್ಪತ್ತಿಗೆ ಹೇತುವಾಗುವನು. ಅದರಂತೆಯೆ ಗುರುಲಿಂಗ ಜಂಗಮ ಮೂರ್ತಿಗಳಲ್ಲಿ ಶಿವನುತೋರಿ ಭಕ್ತನನ್ನುದ್ಧರಿಸುವನು. ಅಂಕುರಾದಿ ಫಲಾಂತವಾದ ಕಾರ್ಯವು ಒಂದೆ ಕಾರ್ಯವಿದ್ದು. ಅಂಕುರೋತ್ಪತ್ತಿ ಕುಸುಮಾವಿರ್ಭಾವ ಫಲನಿಷ್ಪತ್ತಿಗಳು ಅದೊಂದೆ ಕಾರ್ಯದ ಅವಸ್ಥಾವಿಶೇಷಗಳು. ಅದರಂತೆಯೆ ಭಕ್ತನ ಶಿವಾತ್ಮಕಪತ್ತಿಯೆಂಬುದೊಂದೇ ಕಾರ್ಯವು. ಅದರ ಅವಸ್ಥಾ ವಿಶೇಷಣಗಳು ದೀಕ್ಷಾ, ಅನುಭವ, ಜ್ಞಾನಗಳು. ಹೀಗಿರುವುದರಿಂದಲೆ ಷಡ್ಲಿಂಗಗಳ ವಿವರಣದಲ್ಲಿ ಗುರುಲಿಂಗೋಪದೇಶದಿಂದ ಶಿವಲಿಂಗ ಪ್ರಾಪ್ತಿಯೆಂತಲೂ ಶಿವಲಿಂಗ ಮುಖಭೂತವಾದುದೆ ಜಂಗಮಲಿಂಗವೆಂತಲೂ ಉಕ್ತಿಯುಂಟು. ಗುರುವು ಮಂತ್ರೋಪದೇಶವನ್ನುಮಾಡಿ ಆ ಮಂತ್ರವೆ ಮೂರ್ತಿಯಾದ ಲಿಂಗವನ್ನು ಹಸ್ತಗತವನ್ನಾಗಿಸಿದನು. ಆ ಹಸ್ತಗತವಾದ ಲಿಂಗವು ಆಯಾ ಇಂದ್ರಿಯಗಳಲ್ಲೆಲ್ಲ ವ್ಯಾಪಿಸಿ ಚರರೂಪವನ್ನು ಹೊಂದುವುದು. ಈ ಚರರೂಪವನ್ನು ಹೊಂದಿದ ಸಾಕ್ಷಾತ್ಕಾರಸ್ಥಿತಿಯು ಜಂಗಮನಿಂದ ಬೋಧವಾಗುವುದು. ಒಂದೇ ಶರೀರವಿಶಿಷ್ಟನಾದ

ವ್ಯಕ್ತಿಯು ಇವೆರಡೂ ಕಾರ್ಯಗಳನ್ನು ಮಾಡಿದರೆ ಸಹ ಕಾರ್ಯವಶಾತ್ ಆತನು ಮೊದಲನೆಯ ಕಾರ್ಯದಲ್ಲಿ ಗುರುವೆನಿಸಿಯೂ ಎರಡನೆಯ ಕಾರ್ಯದಲ್ಲಿ ಜಂಗಮನೆನಿಸಿಯೂ ಶಿಷ್ಯನ ಮಲಾಪನಯನವನ್ನು ಮಾಡುವನು. ಇದನ್ನು ಶ್ರೀಸಂಗಮನೂ ಶ್ರೀಪ್ರಭುವೂ ಬಸವನ ಜ್ಞಾನ ವಿಕಾಸದಲ್ಲಿ ಮಾಡಿದ ವ್ಯಾಪಾರ ವಿಶೇಷಗಳಿಂದಲೂ ಬಸವನ ಅನುಭವೋಕ್ತಿಗಳಿಂದಲೂ ಸಿದ್ಧಪಡಿಸುವ:- ಮೊದಲು ಪ್ರಭುಲಿಂಗಲೀಲೆಯಲ್ಲಿ ಶ್ರೀ ಸಂಗಮೇಶನೆ ದೀಕ್ಷಾಗುರುವೆಂದು ಕಂಠೋಕ್ತಿಯಿಂದ ಹೇಳಿದುದನ್ನು ವಾದಿಗಳು ಒತ್ತಟ್ಟಿಗಿಟ್ಟು ಪ್ರಭುಲಿಂಗಲೀಲೆಗೂ ಬಸವ ಪುರಾಣಕ್ಕೂ ವ್ಯತ್ಯಾಸವಿದ್ದಂತೆ ಪ್ರಶ್ನದಲ್ಲಿ ಗೂಢವಿಟ್ಟಿರುವರು. ಅದನ್ನು ಹೊರಗೆಡವುವ. "ಉನ್ಮೀಲ್ಯಚಕ್ಷುಷೀ ಈಷತ್ ಕುಲೀಕೃತಾಂಗಃ ಶಿಶುರ್ನಚಾಂಚಲ್ಯ ಮವಾಪಕಿಂಚಿತ್ । ಯದಾತದಾಭ್ಯೇತ್ಯತು ಸಂಗಮೇಶೋದಧೌತದಂಗೇ ಸಹಜೇಷ್ಟಲಿಂಗಂ" ಪ್ರಭುಲಿಂಗಲೀಲಾ ೯ ಅಧ್ಯಾಯ ೨೧ ಶ್ಲೋಕ ಶಿಶುವು ಕಣ್ದೆರೆದು ಮೈಯನ್ನು ಮುದುಗಿಸಿ ಏನೊಂದು ಚಲಿಸಲಿಲ್ಲ. ಆಗ ಸಂಗಮೇಶನು ಪ್ರಾಪ್ತನಾಗಿ ಸಹಜವಾದ ಇಷ್ಟಲಿಂಗವನ್ನು ಆತನತನುವಿನಲ್ಲಿ ಧಾರಣಗೈದನು. ಅಂಗದಲ್ಲಿ ಲಿಂಗಧಾರಣಗೆಯ್ಯುವುದೇ ದೀಕ್ಷಾಗುರುತ್ವವು. ಈ ದೀಕ್ಷೆಯಿಂದ ಸರ್ವ ವಸ್ತುಗಳಲ್ಲಿಯೂ ಶಿವಾಖಂಡ ಚೈತನ್ಯವಿರುವುದೆಂದು ವ್ಯಕ್ತವಾಗುತ್ತದೆ. ಅರ್ಥಾತ್ ಮಲದ ಆವರಣದ ಶಕ್ತಿಯು ಕ್ಷೀಣವಾಗುತ್ತದೆ. ಈ ವಿವರನ್ನು ಶ್ರೀಸಿದ್ಧಾಂತ ಶಿಖಾಮಣಿ ಸಂಗೃಹೀತ ಶಾಸ್ತ್ರವಚನಗಳಿಂದ ನೋಡು. ಕ್ರಿಯಾದೀಕ್ಷೆಯನ್ನು "ಕುಂಡಮಂಡಲಿ ಕೋಪೇತಾಕ್ರಿಯಾದೀಕ್ಷಾಕ್ರಿಯೋತ್ತರಾ ।" ಇತ್ಯಾದಿಯಾಗಿ ಬಣಿಸುತ್ತ "ಏವಂಕೃತ್ವಾ ಗುರುರ್ಲಿಂಗಂ ಶಿಷ್ಯಹಸ್ತೇನಿಧಾಪಯೇತ್ । ಪ್ರಾಣವದ್ಧಾರಣೀಯಂತ ತ್ಪ್ರಾಣಲಿಂಗಮಿದಂತವ । ಕದಾಚಿತ್ಕುತ್ರಚಿದ್ವಾಪಿನ ವಿಯೋಜಯದೇಹತಃ ॥ ಯದಿಪ್ರಮಾದಾತ್ಪತಿತೇಲಿಂಗೇ ದೇಹಾನ್ಮಹೀತಲೇ । ಪ್ರಾಣಾನ್ವಿಮುಂಚ ಸಹಸಾ ಪ್ರಾಪ್ತಯೇ ಮೋಕ್ಷಸಂಪದಃ ॥ ಇತಿ ಸಂಬೋಧಿತಃ ಶಿಷ್ಯೋಗುರುಣಾ ಶಾಸ್ತ್ರವೇದಿನಾ । ಧಾರಯೇಚ್ಛಾಂಕರಂಲಿಂಗಂ ಶರೀರೇ ಪ್ರಾಣಯೋಗತಃ" ಇತ್ಯಂತವಾಗಿ ಲಿಂಗಧಾರಣ

ವನ್ನು ವಿಧಿಸಿರುವನು. ಹಾಗೂ ಲಿಂಗಸ್ಥಳದ ದೀಕ್ಷಾಗುರುಸ್ಥಳದಲ್ಲಿ ದೀಕ್ಷಾಪ್ರಯೋಜನವನ್ನು "ಅಖಂಡಂ ಯೇನಚೈತನ್ಯಂವ್ಯಜ್ಯತೇಸರ್ವವಸ್ತುಷು । ಆತ್ಮಯೋಗ ಪ್ರಭಾವೇಣ ಸಗುರುರ್ವಿಶ್ವಭಾಸಕಃ" ಅಖಂಡ ಶಿವಚೈತನ್ಯಾಭಿವ್ಯಕ್ತಿಯು ಅಂದರೆ ಮಲನಿವೃತ್ತಿಯು ಅಥವಾ ಮಲಾಪಸರಣವು ದೀಕ್ಷಾಪ್ರಯೋಜನವೆಂದು ಹೇಳಿರುವನು. ಅಂದರೆ ತಾನು ಜೀವನೆಂಬ ಭ್ರಮವು ಹಿಂಗಿ ಲಿಂಗರೂಪನಾದೆನೆಂಬ ಜ್ಞಾನೋದಯಕ್ಕೆ ಹೇತುವಹನೆ ದೀಕ್ಷಾಗುರುವು. ಸಂಗಮೇಶನು ಬಸವನ ದೀಕ್ಷಾಗುರುವೆನ್ನುವಲ್ಲಿ ಬಸವಪುರಾಣಕ್ಕೂ ಪ್ರಭುಲಿಂಗಲೀಲೆಗೂ ವಿಸಂವಾದವಿಲ್ಲವು.

ಹೀಗಿದ್ದು ಉಪನಯನವಿವಾದಕಾಲದಲ್ಲಿ ಬಸವನು "ಉಪಾಧ್ಯಾಯೋಗುರುಃ ಸ್ವಾಮೀಮಮಾಚಾರ್ಯಶ್ಚದೇಶಿಕಃ । ಅಲ್ಲಮಪ್ರಭುರೇವೈಕಃ ಸಹಿಮಾಮುಪನೇಷ್ಯತಿ" ೧. ಪ್ರ. ೯-೩೫. ನನಗೆ ಉಪಾಧ್ಯಾಯನೂ ಗುರುವೂ ಆಚಾರ್ಯನೂ ತತ್ವಾವೇದಕನೂ, ಅಲ್ಲಮಪ್ರಭುವೊಬ್ಬನೆ ಆತನೆ ಖಂಡಿತವಾಗಿ ಎನ್ನನು ಉಪನಯನಗೆಯ್ಯುವನು. ಎಂದು ಮುಂತಾಗಿ ಆಡಿದುದರ ಅರ್ಥವೇನು? ಕೇಳು:—ಪ್ರಾಕೃತನಾದ ಮಾದರಸನು ಉಪನಯನವಾಗತಕ್ಕವನೆಂದು ಭಾವಿಸಿದ ಬಸವನಲ್ಲಿ ತನ್ನ ಪುತ್ರತ್ವವನ್ನು ಕಲ್ಪಿಸಿ ಉಪನಯನಸಂಸ್ಕಾರವನ್ನು ವಿಧಿಸಲಿಕ್ಕೆ ಅನುವಾಗಿದ್ದನು. ಬ್ರಾಹ್ಮಣ ಬ್ರಾಹ್ಮಣಿಯರಾದ ತನ್ನ ಹಾಗು ಮಾದಲಾಂಬಿಯ ಉದರದಲ್ಲಿ ಅವರ್ಣನೀಯವಾದ ಹೇತುವಿನಿಂದ ಅವತಾರ ತಾಳಿದ ಧರ್ಮಮೂರ್ತಿಯನ್ನು ಪ್ರಾಕೃತ ಬ್ರಾಹ್ಮಣ ಪಿಂಡವೆಂದು ಬಗೆದು ಆ ಪಿಂಡಕ್ಕೆ ಉಪನಯನ ಸಂಸ್ಕಾರವನ್ನು ಮಾಡಿಸಬೇಕೆಂದಿದ್ದನು. ಅದಂ ನಿಷೇಧಿಸಿ ಪಾರಮಾರ್ಥಿಕವಾದ ತನ್ನ ಸ್ವರೂಪವನ್ನುದ್ಬೋಧಿಸಿ ಬಸವ ವಚನವಿದೆ. ಎಲೈ ಮಾದರಸನೆ ನಾನು ಗುರುಕರಕಮಲಜಾತನಾದುದರಿಂದೆ "ತ್ವಮೇವನಃ ಪಿತಾಯೋಸ್ಮಾಕಮವಿದ್ಯಾಯಾಃ ಪರಂ ಪಾರಂತರಯಸಿ" ಎಂಬ ಮುಂಡಕಾದಿ ಶ್ರುತಿಗಳು ಸಾರುತ್ತಿರುವಂತೆ ಸಂಗಮೇಶನೆನಗೆ ತಂದೆಯು. ಗುರುಪುತ್ರನಿಗೆ ಉಪನಯನವನ್ನು ನಿರ

ಜನ ಜಂಗಮರೂಪನಾದ ಪ್ರಭುವೆ ಮಾಡತಕ್ಕವನು. ಆವನೆ ಎನಗೆ ಆಚಾರ್ಯನು. ಬಸವನ ಭಾಷೆಯಲ್ಲಿ ಉಪನಯನವೆಂದರೆ ಉಪ ಆಯಾಲಿಂಗಗಳಸಾನ್ನಿಧ್ಯಕ್ಕೆ ನಯನ ಒಯ್ಯೋಣ ಅಂದರೆ ಆಯಾಲಿಂಗಗಳ ಸ್ವರೂಪವನ್ನು ಬೋಧಿಸೋಣ. ದೀಕ್ಷೆಯಿಂದ ಸಾಂಸಾರಿಕ ಭ್ರಮೆಯು ಳಿದು ಲಿಂಗತತ್ವದ ಸಾಮಾನ್ಯಬೋಧವಾಗಿದ್ದಿತು. ಲಿಂಗತತ್ವದ ಸಾಮಾನ್ಯಜ್ಞಾನವೆಂದರೆ ಸ್ಥೂಲ ಶರೀರದಲ್ಲಿ ಪ್ರಕಟವಾದ ಚೈತನ್ಯವೂ, ಸೂಕ್ಷ್ಮ ಶರೀರದಲ್ಲಿ ಒಡೆದು ತೋರುವ ಜ್ಞಾನವೂ, ಕಾರಣ ಶರೀರಗತ ಆನಂದವೂ ಆಯಾ ತನುತ್ರಯದ ಉಪಾಧಿಯನ್ನು ಬೇರ್ಪಡಿಸಲು ಶಿವ ಸ್ವರೂಪವೆಂಬ ಜ್ಞಾನವು. ಆದರ ವಿಶೇಷ ಸ್ವರೂಪದ ಪರಿಯೆಂತೆಂದರೆ, ಆಯಾ ಕರ್ಮೇಂದ್ರಿಯ ಜ್ಞಾನೇಂದ್ರಿಯಾಂತರಿಂದ್ರಿಯಗಳಲ್ಲಿ ಆಯಾ ವ್ಯಾಪಾರವನ್ನು ಆಯಾ ವಿಶೇಷ ಜ್ಞಾನವನ್ನು ಮಾಡುವ ಮತ್ತು ವ್ಯುತ್ಪಾದಿಸುವ ಚೈತನ್ಯವನ್ನು ಸದಾಕಾಲದಲ್ಲಿಯೂ ಗುರುತಿಸುವುದು ಹಾಗು ಕಾರಣ ಶರೀರಧರ್ಮವಾದ ನಿದ್ರೆಗೆ ವಶನಾಗದೆ ಯೋಗನಿದ್ರಾಸುಖಿತನಾಗುವುದು ಇದನ್ನು ಬಸವೇಶನ ಪ್ರಶ್ನದಿಂದಲೆ ಹೊರಡಿಸೋಣ. ಮೊದಲು ಗುರುಜಂಗಮೋಭಯಮೂರ್ತಿಗತ ಶಿವನೋರ್ವನೆ ಎಂಬುದನ್ನು ಬಸವಪ್ರಭುದೇವರ ಸಮಾಗಮ ಪ್ರಸ್ತಾವದಿಂದ ದೃಢೀಕರಿಸೋಣ ಪ್ರಭು ನಮಸ್ಕರಣ ಬಸವ ವಚನವು:-"ಮನಮುಟ್ಟಿದ ಭಕ್ತಿಗೆ ತನುವೆಅರ್ಪಿತ ತನುಮುಟ್ಟಿದ ಭಕ್ತಿಗೆ ಮನವೆ ಅರ್ಪಿತವಯ್ಯಾ ಎನ್ನತನು ಮನವೆರಡು ನಿಮ್ಮ ಚರಣಕ್ಕೆ ವೇದ್ಯವು ನೋಡಯ್ಯಾ "ದೀರ್ಘದಂಡನಮಸ್ಕಾರೇಣ ಲಜ್ಜಾಂಗುರುಸನ್ನಿಧೌ । ಶರೀರಮರ್ಥಂ ಪ್ರಾಣಾಂಶ್ಚ ಸದ್ಗುರುಭ್ಯೋನಿವೇದಯೇತ್ ॥ ಎಂದುದಾಗಿ ತ್ರಾಹಿ ತ್ರಾಹಿ ಶರಣಾರ್ಥಿ ನಿಂನವೇಬಲ್ಲಿರಿ ಕೂಡಲ ಸಂಗಮದೇವ" ಎಂಬೀ ನಮಸ್ಕಾರ ವಚನಭಾವಗಳಿಂದ ಗುರುಜಂಗಮ ಮೂರ್ತಿಗಳಲ್ಲಿ ಭೇದ ವಿರಲಿಲ್ಲೆಂದು ಬಸವನಭಿಪ್ರಾಯವು. ಇನ್ನು ತನಗೆ ಲಿಂಗಧಾರಣದಿಂದ ಉಂಟಾದ ಅನುಭವವನ್ನು ತಿಳಿಯದೆ ಉಳಿದಿರುವ ಅಂಶಗಳನ್ನು ವಿವರಿಸುವ ಉಕ್ತಿಗಳು. "ಮೂಗಕಂಡಕನಸಿನ ಪರಿಯೇತಾಯಿತ್ತೆನ್ನ ಶಿವಾಚಾರ ಹೇಳಬಾರದು ಕೇಳಬಾರದಾರಿಗೆಯೂ ಎನ್ನ ಹೆಗ್ಗತನವಮಾಣಿಸಯ್ಯಾ ಕೂಡಲ ಸಂಗ

ಮಹದೇವ ಪ್ರಭುವೆ" ಒಬ್ಬಾನೊಬ್ಬ ಮೂಕನಿಗೊಂದು ಕನಸುಬಿದ್ದಿರ
ಲು ಅದು ಆತನಿಗೆ ಅವ್ಯಕ್ತವಾಗಿ ಗೋಚರಿಸಿದರು, ಅದರ ಸ್ವರೂಪ
ವನ್ನಾತನು ಒಡೆದು ಆಡಲಾರನು. ಚಕ್ಷುರಿಂದ್ರಿಯವು ಪಟುವಾಗಿರು
ವಾತನ ಜ್ಞಾನವದೆಂತು ಸ್ಫುಟವಾಗಿರುವುದೋ ಹಾಗೆ ಮೂಕನ ಜ್ಞಾನ
ವು ಸ್ಫುಟವಾಗಿರದು. ಅದರಂತೆ ಭಕ್ತಿಯಿಂದ ಗುರುವಿತ್ತ ಲಿಂಗಸ್ವರೂ
ಪವೆ ತಾನೆಂದು ಗುರೂಕ್ತಿಯಂತೆ ನಾನು ಚಿಂತಿಸುತ್ತಿರಲು ಆ ಸ್ವರೂಪದ
ಹೊಳಹು ದೋರುತ್ತದೆ ಇಂದ್ರಿಯಗಳನ್ನು ಮುಸುಕಿದ ಅಂಧಕಾರವು
ಹರಿದು ಸ್ವಾನುಭವವು ವ್ಯಕ್ತವಾಗಲೊಲ್ಲದು. ಸಾರಾಂಶ ಮರಹೆಂಬ ಮ
ಲನಿವೃತ್ತಿಯಾಗಿ ಆ ಮಲನಿವೃತ್ತಿಯಿಂದ ಮಾಯಾಕರ್ಮಪಾಶಗಳು
ಅಂಶತಃ ಸಡಿಲಾಗಿದ್ದರು, ಮಾಯಾಪಾಶವೂ ಕರ್ಮಪಾಶವೂ ಇನ್ನೂ
ಉಳಿದಿವೆ ಅವುಗಳ ಸಮಗ್ರಚ್ಛೇದವನ್ನು ಜ್ಞಾನೋಪದೇಶದಿಂದ ಮಾಡು
ವುದೆಂಬರ್ಥ. ಪ್ರಭುದೇವನು ಈ ಪ್ರಶ್ನಕ್ಕುಚಿತವಾಗಿ ಜ್ಞಾನೋಪದೇ
ಶಂಗೈದಿರುವನು. ಅದರಲ್ಲಿ ದೀಕ್ಷಾಕಾಲದಲ್ಲಿ ಪ್ರಾಪ್ತವಾದ ಲಿಂಗ
ಧಾರಣವನ್ನು ಪೂರ್ವಭಾವಿಯಾಗಿ ಹಿಡಿದು ಅದರ ಉತ್ತರವಿವರವೇ ಸಂ
ಗ್ರಹಿಸಲ್ಪಟ್ಟಿದೆ. ಶ್ರೀಮದಲ್ಲಮನು ಬಸವನಿಗೆ ಲಿಂಗಧಾರಣಂಗೈದ
ನೆಂದು ೧೬ ನೇಯ ಸಂಧಿಯಲ್ಲೆಲ್ಲೂ ಹೇಳಿಲ್ಲ. ಹೀಗೆಸಂಶಯಕ್ಕಾಸ್ಪದ
ವು ಲೇಶಮಾತ್ರವಿಲ್ಲವಾದರು ಪಾಪಾತ್ಮರು ಶ್ರೀಸಂಗಮೇಶನು ದೀಕ್ಷಾ
ಗುರುವೊ ಪ್ರಭುದೇವನು ದೀಕ್ಷಾಗುರುವೊ ಎಂದು ನಿರಾಸ್ಪದವಾಗಿ
ಪ್ರಶ್ನೆವನ್ನೆಬ್ಬಿಸುವರು.

ಲಿಂಗಧಾರಣರೂಪ ದೀಕ್ಷೆಯು ಶಾಸ್ತ್ರದಲ್ಲಿ ಒಂದೇ ಒಂದು ವಿಹಿ
ತವಾಗಿರುತ್ತದೆ. ಯಥಾಶಾಸ್ತ್ರವಾದ ದೀಕ್ಷೆಯು ಸಂಸಾರದಲ್ಲಿ ಜುಗು
ಪ್ಸೆಯುಂಟಾದ ಬಳಿಕ ಸದ್ಗುರುವಿನಿಂದಾಗತಕ್ಕದು. ಸಂಸಾರ ಜುಗು
ಪ್ಸೆಯು ಪಶುಧರ್ಮವಾದ ವರ್ಣಧರ್ಮಗಳನ್ನು ಅನುಷ್ಠಾನಂಗೈಯು
ತ್ತ ಬಂದ ಶುದ್ಧಾಂತಃಕರಣನಿಗಾಗುತ್ತದೆ. ತದನಂತರದಲ್ಲಿ ಸಂಸಾರ
ಬಂಧನದಿಂದ ಆಸಕ್ತಿರುವ ಜೀವನು ಅದರ ನಿವೃತ್ತಿಗಾಗಿ ಶಿವಶಾಸ್ತ್ರಪಾ
ರಂಗತನಾದ ಮತ್ತು ಶಿವಾನುಭವಿಯಾದ ಗುರುವಿನಲ್ಲಿ ಶರಣಾಗತನಾಗಿ

ಲಿಂಗಧಾರಣವನ್ನು ಪಡೆದುಕೊಳ್ಳುವನು. ಈ ವಿಷಯವು ಅಂಗಸ್ಥಲಗಳಲ್ಲಿ ಮೊದಲು ಪಿಂಡಸ್ಥಳ ಬಳಿಕ ಪಿಂಡಜ್ಞಾನಸ್ಥಳ ತದನಂತರದಲ್ಲಿ ಸಂಸಾರಹೇಯಸ್ಥಳ ಅದಾದ ತರುವಾಯದಲ್ಲಿ ಲಿಂಗಧಾರಣ ಸ್ಥಳವು ಬರುವುದರಿಂದ ಸ್ಪಷ್ಟವಾಗಿದೆ. ಶಿವಧರ್ಮ ಪ್ರವೇಶಕ್ಕೆ ಶಕ್ಯವಾದ ಪುಣ್ಯಸಂಚಯಗಳಿಂದ ಯುಕ್ತನಾದ ಆತ್ಮನೆ ಪಿಂಡವೆನಿಸುವನು. ಆ ಆತ್ಮನೆ ಶರೀರಾತ್ಮವಿವೇಕದಿಂದ ಪಿಂಡಜ್ಞಾನಿ ಎನಿಸುವನು. ಶರೀರಾತ್ಮವಿವೇಕದಿಂದ ಸಂಸಾರ ಜುಗುಪ್ಸೆಯಾಗಲು ಅದುವೆ ಸಂಸಾರ ಹೇಯಸ್ಥಳವು ಸಂಸಾರಕ್ಕೆ ಹೇಸಿ ಅದರ ಪರಿಹಾರಾರ್ಥವಾಗಿ ಸದ್ಗುರುವಿನಿಂದ ಲಿಂಗಧಾರಣವನ್ನು ಹೊಂದುವುದೆ ಲಿಂಗಧಾರಣವು. ಆದರೆ ವೀರಶೈವ ಧರ್ಮ ಪ್ರವೇಶಕ್ಕೆ ಈ ರೀತಿಯಲ್ಲಿ ಅರ್ಹತೆಯನ್ನು ಸಂಪಾದಿಸುತ್ತಿರುವ ಜೀವನು ಸಾಧನವು ಪೂರ್ತಿಯಾಗುವಷ್ಟರಲ್ಲಿ ಮರಣವನ್ನು ಹೊಂದಿದನಾದರೆ ಪೂರ್ವವಾಸನಾ ಬಲದಿಂದ ವೀರಶೈವ ಮಾತಾಪಿತೃಗಳುದರದಲ್ಲಿ ಜನಿಸುವನು ಅಂದರೆ ಆತನಿಗೆ ಜನನಾನಂತರದಲ್ಲಿ ಲಿಂಗಧಾರಣವಾಗುವುದು. "ಪೂರ್ವಾಭ್ಯಾಸೇನ ತೇನೈವ ಹ್ರಿಯತೇ ಹ್ಯವಶೋಽಪಿಸಃ। ಗೃಹೇಷು ಲಿಂಗಿನಾಮೇವ ಮತಭ್ರಷ್ಟೋಽಭಿಜಾಯತೇ ॥ ಪಾರಮೇಶ್ವರೇಽಪಟಲು" ಎಂಬ ವಾಕ್ಯವು ಪ್ರಮಾಣವಾಗಿದೆ. ಆದರೆ ಬಾಲ್ಯದಲ್ಲಿಯಾದ ಲಿಂಗಧಾರಣದಿಂದ ತಾದೃಶಬೋಧವಾಗದರಿಂದ ಬಾಲಕನಿಗೆ ಸಾಧಾರಣ ತಿಳುವಳಿಕೆಯು ಬರಹತ್ತಲು ೮ ನೇಯ ವರ್ಷದಲ್ಲಿ ಮೊದಲು ಜನ್ಮಕ್ಷಣದಲ್ಲಿಯೆ ಆಗಿರುವ ದೀಕ್ಷೆಯನ್ನು ಸಾಂಗವಾಗಿ ಮಾಡಬೇಕಾಗುತ್ತದೆ. ಈ ದೀಕ್ಷೆಯು ನಮ್ಮಂಥ ಜೀವರುಗಳಿಗೆ ಆವಶ್ಯಕವಾದರೂ ಬಾಲ್ಯದ ಮರೆವೆಯು ಹೋಗದ ಬಸವನಿಗೆ ಅನಾವಶ್ಯಕವಾಗಿದ್ದಿತು. ಜನ್ಮಕ್ಷಣದಲ್ಲಾದ ದೀಕ್ಷೆಯು ಎಚ್ಚರಗೊಡುವುದೇ ಎಂಟನೆಯ ವರ್ಷದ ದೀಕ್ಷೆಯನ್ನದಿದ್ದರೆ ಜನ್ಮಕ್ಷಣದಲ್ಲಿ ಮಾಡಿದ ಲಿಂಗಧಾರಣವು ಲಿಂಗಧಾರಣವೆನಿಸಲಾರದು. ಏಕೆಂದರೆ ಎರಡುಸಾರೆ ಲಿಂಗಧಾರಣ ದೀಕ್ಷೆಯನ್ನು ಎಲ್ಲಿಯೂ ಹೇಳಿರುವುದಿಲ್ಲ.

ಸತಿಪತಿಗಳೀರ್ವರಿಗೆ ಒಬ್ಬನೆ ಗುರುವಿರಬೇಕೆಂಬುದು ಪ್ರಸ್ತುತವಾದಕ್ಕೆ ಸಂಬಂಧ ಪಟ್ಟವಿಷಯುವಲ್ಲ ಶ್ರೀಬಸವೇಶನಿಗೆ ಗುರುವಾದ

ಸಂಗಮೇಶನೆ ಗಂಗಾಂಬಾ ಮಾತುೃವಿಗೆ ಲಿಂಗಧಾರಣವ ಮಾಡಿದುದನ್ನು ವಾದಿಗಳೇ ಒಪ್ಪಿ ಅದನ್ನೊಂದು ಪ್ರಶ್ನಕ್ಕೆ ಬೀಜವನ್ನಾಗಿಟ್ಟುಕೊಂಡಿರುವರು. ಅದರಿಂದಂತೂ ವಾದಿಗಳ ೫೧ ನೇಯ ಪ್ರಶ್ನವು ನಿರಾಧಾರವು. ಆದರೆ ಈ ನಿಯಮದ ನಿಜವಾದ ವ್ಯಾಪ್ತಿಯು ತಿಳಿಯದ ವಾದಿಗಳು ಉತ್ತರವನ್ನೊಂದು ಪ್ರಶ್ನಕ್ಕೆಹೇಳಲಿ. "ಏಕಏವ ಗುರುಃ ಸಾಕ್ಷಾದ್ಭರ್ತೃಭಾರ್ಯಾತ್ಮಜನ್ಮನಾಂ" ಎಂಬ ವಾಕ್ಯವನ್ನು ನೀವು ಹೇಳುವಂತೆ ಸರ್ವತ್ರವ್ಯಾಪಿಸುವುದೆಂದು ಹೇಳಿದರೆ ಹೆಣ್ಣುಮಕ್ಕಳಿಗೆ ಲಗ್ನವಾಗುವ ಸಮಯದತನಕ ಲಿಂಗಧಾರಣ ಮಾಡಬಾರದಾಗುತ್ತದೆ. ಹುಟ್ಟಿದಕೂಡಲೆ ಹೆಂಣುಗೂಸಿನ ಪತಿಯು ಇಂತಹನೆ ಆಗುವನೆಂದು ತಿಳಿಯಲಾರದು. ಆಕೆಯ ಭರ್ತೃವು ಲಗ್ನಕಾಲಕ್ಕೆಯೆ ನಿಶ್ಚಿತನಾಗುವನು. ಸತಿಪತಿಗಳೀರ್ವರಿಗೂ ಒಬ್ಬನೆ ಗುರುವಾಗಬೇಕಾದುದರಿಂದ ಗಂಡನನ್ನು ದೀಕ್ಷಿಸಿದ ಗುರುವೆ ಆಕೆಯನ್ನು ದೀಕ್ಷಿಸಿ ಲಿಂಗಧಾರಣಂಗೆಯ್ಯಬೇಕಾಗಿ ಬರುತ್ತದೆ. ಹುಟ್ಟಿದ ಕಾಲಕ್ಕೆ ಒಂದು ಲಗ್ನದ ಕಾಲಕ್ಕೆ ಒಂದು ಹೀಗೆ ಎರಡು ಲಿಂಗಗಳನ್ನು ಧರಿಸಲಿಕ್ಕಂತು ಶಾಸ್ತ್ರದಿಂದ ಬರಲಾರದು. "ಲಿಂಗದ್ವಯಂ ನೈವಧಾರ್ಯಂ ನಪೂಜ್ಯಂ ಲಿಂಗಯುಗ್ಮಕಮ್" ಪಾ. ೧೪ ಪ. ೧೯ ಶ್ಲೋಕ. ಎರಡು ಲಿಂಗಗಳನ್ನು ಧರಿಸಲೆಕೂಡದು ಎರಡುಲಿಂಗಗಳು ಪೂಜಿಸತಕ್ಕುವಲ್ಲ. ಆದುದರಿಂದ ಶಾಸ್ತ್ರತಾತ್ಪರ್ಯವನ್ನು ತಿಳಿಯದೆ ಏನಾದರೊಂದು ಮೂರ್ಖತ್ವವನ್ನುಸೆರಿಗಿನಲ್ಲಿ ಕಟ್ಟಿಕೊಳ್ಳುವುದು ಬುದ್ಧಿವಂತಿಕೆಯಲ್ಲ.

ಬಸವನಿಗೆ ಸಂಸ್ಕೃತವು ಬರುತ್ತಿತ್ತೊ ಇಲ್ಲವೊ ಎಂಬುದನ್ನು ಹಿಂದಿನಿಂದ ವಿಚಾರಿಸೋಣ. ಆದರೆ, ಭ್ರಾಂತರು ದೇವತೆಗಳ ಭಾಷೆಯು ಕೇವಲ ಸಂಸ್ಕೃತವು. ಆದರಿಂದ ಬಸವನಿಗೆ ಸಂಸ್ಕೃತವು ಬಾರದಿದ್ದರೆ ಆತನು ದೇವರಲ್ಲ ಎಂದು ಹೇಳುವರಲ್ಲ! "ದೇವತೆಗಳ ಭಾಷೆಯು ಕೇವಲ ಸಂಸ್ಕೃತವಲ್ಲವೆ" ಎಂಬುಧರ ಅರ್ಥವೇನು ? ಕೇವಲ ಶಬ್ದಾರ್ಥವು "ಮತ್ತೊಂದು ಇಲ್ಲಪೆ" ಎಂದಾಗುತ್ತದೆ. "ಇದು ಕೇವಲ ಪ್ರಾಮಾಣಿಕತ್ವವು ಎಂದರೆ ಇದರಲ್ಲಿ ಅಪ್ರಾಮಾಣಿಕತೆಯ ಮಿಶ್ರಣವಿಲ್ಲಂತ

ತಿಳಿಯುತ್ತದೆ. ಇದು ಕೇವಲ ಸುವರ್ಣವು ಎಂದರೆ ಇದರಲ್ಲಿ ಬೇರೆ
ಧಾತುವಿನ ಮಿಶ್ರಣವಿಲ್ಲೆಂದಾಗುತ್ತದೆ. ಅದರಂತೆಯೆ ದೇವತೆಗಳ ಭಾಷೆ
ಯು ಕೇವಲ ಸಂಸ್ಕೃತವೆನ್ನುವುದರಿಂದ ದೇವತೆಗಳು ಉಳಿದ ಭಾಷೆಗಳ
ನ್ನರಿಯರೆಂದಾಯಿತು. ಹಾಗಾದರೆ, ಈಗ ಸಂಸ್ಕೃತವನ್ನರಿಯದ ಜನ
ರು ಮಾಡುವ ಸ್ತುತಿಗಳು ದೇವತೆಗಳಿಗೆ ತಿಳಿಯಲಾರವು. ಪರಮಾತ್ಮ
ನನ್ನು ಸ್ತುತಿಸುವ ಯೋಗ್ಯತೆಯು ನಂಮ ಕಾಶೀನಾಥ ಶಾಸ್ತ್ರಿಯೊಬ್ಬ
ರಿಗೆ ಮಾತ್ರ. ಅವರಿಂದ ಅನುಗ್ರಹವನ್ನು ಹೊಂದಿ ಸಂಸ್ಕೃತದಲ್ಲಿ ಪಾಂ
ಡಿತ್ಯವನ್ನು ಹೊಂದಿದ ಊಬಸದ ಶಾಂತಪ್ಪನಿಗೆ ಇರಬೇಕಾಗಿ ಬಂದಿತು.
ನಮ್ಮಂತಹ ಪಾಮರರಂತು ದೇವರ ಹೆಸರನ್ನು ಸಹ ತೆಗೆದುಕೊಳ್ಳಲಿಕ್ಕೆ
ಅನರ್ಹರು. ಎಲೈ ಮೂರ್ಖಶಿಖಾಮಣಿಯೆ ಪರಮಾತ್ಮನು ಸರ್ವಗ
ತನಾದನು. ಸರ್ವ ಭಾಷೆಗಳು ಅವನಿಂದಲೆ ಹುಟ್ಟಿದುವು. ಅವನಿಗೆ
ಸಂಸ್ಕೃತ ಭಾಷೆಯಲ್ಲಿ ಪಕ್ಷಪಾತವಿಲ್ಲ. ತನ್ನ ಭಕ್ತರ ಹೃದಯಗಳ
ಪ್ರೇಮಕಾಷ್ಟನು. ಅದಲ್ಲದೆ ಸಂಸ್ಕೃತವು ಅಥವಾ ತಿದ್ದಿದ ಭಾಷೆಯಾವುದು
ಪ್ರಾಕೃತ ಅಥವಾ ಹುಟ್ಟುಗುಣವುಳ್ಳ ಭಾಷೆಯಾವುದು ತಿಳಿದಿರುವಿಯಾ!
ಮೂರ್ಖಾ, ನೀನೀಗ ಪ್ರಮಥರನ್ನು ನಿಂದಿಸಲಿಕ್ಕೆ ಆಡುತ್ತಿರುವ ಪ್ರ
ಶ್ನೆಗಳೇ ಪ್ರಾಕೃತ ಭಾಷೆಯು. ನಂಮ ಬೇಡರ ಕಂಣಪ್ಪನು ಶಿವ
ನನ್ನು ಭಕ್ತಿಪೂರ್ವಕ ಸಂಬೋಧಿಸಿದ ಬೇಡರ ಭಾಷೆಯು ಸಂಸ್ಕೃತವು.
ನಿಂದಾಕಲಂಕಿತ ಹೃದಯನೆ, ನಿನ್ನ ಪ್ರಶ್ನೆಗಳು ಮೂರ್ಖತನದ ಬಾಲ
ಭಾಷೆಯು. ನಂಮ ಕೊಡಗೂಸಿನ ವಚನಗಳು ವೇದೋಕ್ತಿಗಳು. ಪಾ
ಪಚಿತ್ತನೆ ನಿನ್ನೀದುರಾಲಾಪಗಳು ದೇವತೆಗಳಿಗೆ ಕರ್ಕಶವಾದ ಪಿಶಾಚವಾ
ಣಿಯು. ಆದರೆ ಆ ಪಿಶಾಚರಲ್ಲಿಯೂ ಭಕ್ತರಾಡುವ ನುಡಿಗಳು ದೇವ
ವಾಣಿಯು. ಸಂಸ್ಕೃತವು ಬರುತ್ತಿದ್ದರೆಯೆ ದೇವತ್ವವೆನ್ನುತ್ತಿಯಲ್ಲ
ಸಂಸ್ಕೃತವು ಬಾರದಾತನು ಗುರುವೆಂದಾದರು ಹೇಗೆ ಅನ್ನುತ್ತಿ? ಶಿವನೆ
ಗುರುವೆಂದು ಸರ್ವಶಾಸ್ತ್ರಗಳು ಹೇಳುತ್ತವಲ್ಲವೆ? ಶ್ರೀರೇವಣಸಿದ್ಧೇಶ್ವ
ರ ಮರುಳಸಿದ್ಧೇಶ್ವರ ಮುಂತಾದವರಿಗೆ ಸಂಸ್ಕೃತವು ಬರುತ್ತಿತ್ತೆಂದು
ಸಾಧಿಸಲಿಕ್ಕೆ ಅವರು ರಚಿಸಿದ ಗ್ರಂಥಗಳು ಇರುವುವೊ? ಕಾಲ ಮಹಿ
ಮೆಯಿಂದ ವಿದ್ಯಾಹೀನವಾದ ನಂಮ ಸಮಾಜದಲ್ಲಿ ನಿನ್ನ ಅಹಂಕಾರವೆ

ಷ್ಟು! ಬರೆ ಒಂದು ಸಂಸ್ಕೃತವು ಬಂದರೆ ನಿನ್ನ ಶರಣೆಯಿಂದ ಪ್ರಶ್ನೆ ಮಾಡುವವನಿಗೆ ಆರೊಬ್ಬನ ದೇವತ್ವವನ್ನು ಸಿದ್ಧಪಡಿಸಲಾಗುವುದೊ? ಆಗಲಿ, ನಿನ್ನ ಮಾರ್ಗದಿಂದ ಹೋಗೋಣ. ಸಂಸ್ಕೃತವು ಬರುತ್ತಿತ್ತೆಂದು ನೀನು ಹೇಳುವ ಶ್ರೀಪಂಚಾಚಾರ್ಯರಿಗೆ ಆಂಗ್ಲ ಭಾಷಾಜ್ಞಾನವಿದ್ದಿತೊ? ಅದಿಲ್ಲದಿದ್ದರೆ ಸರ್ವಜ್ಞರೆಂಬು ಆವ ವಚನಗಳಿಂದ ಮನಸಿನ ಅಹಂಕಾರಾದಿ ಮಾಲಿನ್ಯವಳಿದು ಚಿತ್ತನಿರ್ಮಲತೆಯುಂಟಾಗಿ ಶಿವಪಾದದಲ್ಲಿ ಭಕ್ತಿ ನೆಲೆಗೊಳ್ಳುವುದೊ ಅದೇ ಸಂಸ್ಕೃತವು, ಅದೇ ವೇದವಾಣಿಯು. ಆವ ವಚನಗಳಿಂದ ಚಿತ್ತದ ಪಾಪವಾಸನೆಗಳಿಗೆ ಉತ್ತೇಜನವಾಗಿ ಅಹಂಕಾರ ಮಮಕಾರವೆಂಬ ಮಲಿನವು ದಪ್ಪಾಗುತ್ತ ನಡೆಯುವುದೊ ಅದು ನಾರಕಿಗಳ ಭಾಷೆ ನಿನ್ನ ಭಾಷೆ. ಇರಲಿ, ಬಸವನಿಗೆ ಸಂಸ್ಕೃತವು ಬರುತ್ತಿತ್ತೆ? ಇಲ್ಲೊ? ಎನ್ನುವುದಕ್ಕೆ ಕೇಳು ಆತನಿಗೆ ಸಂಸ್ಕೃತವು ಬರುತ್ತಿತ್ತು. ಇದೇತರ ಮೇಲಿಂದೆಂದರೆ, ಕೇವಲ ಶಿವಭಕ್ತಿ, ಶಿವಭಕ್ತರಲ್ಲಿ ಸಮಾನಭಾವ, ಸರ್ವ ಪ್ರಾಣಿಗಳಲ್ಲಿ ದಯಾಪರತೆ ಎಂಬೀ ವೀರಶೈವ ಸಮಯಸಾರವನ್ನೇ ಅವನ ವಚನಗಳು ಒಳಕೊಂಡಿರುವುವು. ಅದೇ ಆಗಮಗಳ ಸಾರವು ನೋಡು:-ದಯಾಭೂತೇಷು ಮದ್ಭಕ್ತಿಃ ಸರ್ವತ್ರ ಸಮದರ್ಶನಂ । ಮಲ್ಲಿಂಗಧಾರಣಂ ನಿತ್ಯಂ ಮುಕ್ತಿರೇಷಾಚತುರ್ವಿಧಾ ॥ ಪಾ. ಪ. ೨, ಶ್ಲೋಕ ೩೧-೩೨. "ದಯೆಯಿಲ್ಲದ ಧರ್ಮವದಾವುದಯ್ಯ? ದಯೆ ಬೇಕು ಸರ್ವ ಭೂತಂಗಳಲ್ಲಿ. ಗಂಡನಮೇಲೆ ಸ್ನೇಹವಿಲ್ಲದ ಹೆಂಡತಿ, ಲಿಂಗದಮೇಲೆ ನಿಷ್ಠೆ ಇಲ್ಲದ ಭಕ್ತರಿದ್ದರೇನು ಹೋದರೇನು ಕೂಡಲ ಸಂಗಮದೇವಯ್ಯ ಒಡೆಯುವ ಆವಿಗೆ ಉಂಡದ ಕರುವ ಬಿಟ್ಟಂತೆ, ಭಕ್ತಸ್ಥಳ ೧೦೫. 'ಸಕಲ ಜೀವಾತ್ಮರಿಗೆ ಲೇಸನೆ ಬಯಸುವ ನಂಮ ಕೂಡಲ ಸಂಗಮದೇವನ ಶರಣರೆಲ್ಲ ಕುಲಜರು,' ಮಾಹೇಶ್ವರ ಸ್ಥಳದ ೬೫. ಪ್ರಾಣಲಿಂಗ ಪ್ರತಿಗ್ರಾಹಕನಾದ ಬಳಿಕ ಲಿಂಗವಿರಹಿತನಾಗಿ ನುಡಿಯುವ ಪರಿ ಇನ್ನೆಂತೊ ಲಿಂಗವಿರಹಿತನಾಗಿ ಭೋಗಿಸಲಾಗದು. ಲಿಂಗವಿರಹಿತವಾಗಿ ಉಗುಳ ನುಂಗಲಾಗದು ಇಂತೆಂದುದು ಕೂಡಲ ಸಂಗನ ವಚನವು," ಪ್ರಾಣಲಿಂಗ ಸ್ಥಳ ೧೨ ಎಂಬೀ

ಬಸವನ ವಚನಗಳು ಈ ಆಗಮ ವಾಕ್ಯಗಳನ್ನೇ ಅನ್ನುಡಿಸಿಲ್ಲವೆ ? ಆಗಮಗಳ ಹೃದಯವು ತಿಳಿಯದವನು ಅಂತಹ ವಚನಗಳನ್ನು ಬರೆಯಬಹುದೊ ? ಇದಲ್ಲದೆ ಶ್ರುತಿಯು ಏಕೋಹಿರುದ್ರೋ ನದ್ವಿತಿಯಾಯ ತಸ್ಥುರ್ಯ ಇಮಾಲ್ಲೋಕಾನೀಶತ ಈಶನೀಭಿಃ ॥ ಶ್ವೇತಾಶತರ ೩-೨. ಶಿವನೊಬ್ಬನೆ ಅಧಿದೇವನು, ಬ್ರಹ್ಮವಿಷ್ಣುರುಗಳು ಮತ್ತೊಬ್ಬನಿಗಾಗಿ ನಿಲ್ಲಲಿಲ್ಲ ಎಂದು ಶಿವಸರ್ವೋತ್ತಮತ್ವವನ್ನು ಪ್ರಕಟಿಸುವದನ್ನೆ ಬಸವನು "ಇಬ್ಬರು ಮೂವರು ದೇವರೆಂದು ಉಬ್ಬಿ ಮಾತನಾಡಬೇಡ, ಒಬ್ಬನೆ ಕಾಣಿರೊ ಇಬ್ಬರೆಂಬುದು ಹುಸಿ ನೋಡ ಕೂಡಲಸಂಗಮದೇವನಲ್ಲದಿಲ್ಲೆಂದುದಾ ವೇದವು ॥ ಮಾಹೇಶ್ವರಸ್ಥಳ ೨೦. ಆ ಶಿವ ಸ್ಥಲವು ವಾಗಾದ್ಯತೀತವಾದುದು ಎಂಬುದನ್ನು "ಯತೋ ವಾಚೋ ನಿವರ್ತಂತೇ" ತಲವಕಾರೋಪನಿಷತ್ತು! ಆ ಪರವಸ್ತುವಿನಿಂದ ನುಡಿಗಳು ತಿರುಗುತ್ತವೆ. ಅರ್ಥಾತ್ ನುಡಿಗಳಿಗೆ ಪರವಸ್ತುವು ನಿಲುಕದು. ಎಂಬೀ ಮೊದಲಾದ ಶ್ರುತಿವಾಕ್ಯಗಳು ಹೇಳುವುದನ್ನೆ ಬಸವ ವಚನಗಳು ಹೇಳುವ ಪರಿಯು.– ಮಾತು ಕೆಟ್ಟಲ್ಲದೆ ತಾನಾಗ ಬಾರದು, ಐಕ್ಯಸ್ಥಳ ೬. ಮಾತುಗಳನ್ನು ಆಡಲಿಕ್ಕೆ ಅವಕಾಶವಿರುವತನಕ ನಾನಾವಿಧವಾದ ಪ್ರಪಂಚವು ನಾಮರೂಪಾತ್ಮಕವಾಗಿ ತೋರುವ ವಿಶ್ವವು ಅಡಗಲಾರದು. ಆದುದರಿಂದ ನಿಜಸ್ಥಿತಿಯು ಮಾತಿನ ಸೀಮೆಯು ಮೀರಿ, ಮಾತು ನಿಂತಲ್ಲದೆ ಗೋಚರಿಸದು. ಪರಮಾತ್ಮನು ನಿರಾಕಾರ ನೀರೂಪನಾಗಿರಲು ಆತನನ್ನು ಸಗುಣಧ್ಯಾನದಿಂದಲು ನಿರ್ಗುಣಜ್ಞಾನದಿಂದಲು ಸಾಕ್ಷಾತ್ಕರಿಸಬೇಕೆಂದು ಶ್ರುತಿಗಳು "ಉಮಾಸಹಾಯಂ ಪರಮೇಶ್ವರಂ ಪ್ರಭುಂ । ತ್ರಿಲೋಚನಂ ನೀಲಕಂಠಂ ಪ್ರಶಾಂತಂ ಧ್ಯಾತ್ವಾಮುನಿ ಗಚ್ಛತಿ ಭೂತಯೋನಿಂ ಸಮಸ್ತಸಾಕ್ಷಿಂ ತಮಸಃ ಪರಸ್ತಾತ್ ॥ ಕೈವಲ್ಯ ನೈನಮೂರ್ಧ್ವಂ ನತಿರ್ಯಂಚಂ ನಮಧ್ಯೇ ಪರಿಜಗ್ರಭತ್ । ನತಸ್ಯ ಪ್ರತಿಮಾ ಅಸ್ತಿ ಯಸ್ಯನಾಮ ಮಹದ್ಯಶಃ ॥ ಶ್ವೇ॥ ಪಾರ್ವತೀ ಸಮೇತತ್ವೇತ್ಯಾದಿ ರೂಪ ವಿಶೇಷವನ್ನೂ ಅನಾದ್ಯಂತವಾದ ನಿರ್ಗುಣತ್ವವನ್ನೂ ಬೋಧಿಸುತ್ತವೆ. ಪರಮಾತ್ಮನು ನಿರಾಕಾರನಾದರು ಭಕ್ತರ ಧ್ಯಾನಯೋಗ ನಿಮಿತ್ತವಾಗಿ ರೂಪಗ್ರಹಣ ಮಾಡುವನು.

ಯತೀನಾಂ ಮಂತ್ರಿಣಾಂಚೈವ ಜ್ಞಾನಿನಾಂ ಯೋಗಿನಾಂ ತಥಾ । ಧ್ಯಾನಪೂಜಾನಿಮಿತ್ತಂ ಹಿತನುಂಗೃಹ್ಣಾತಿ ಮಾಯಯಾ ॥ ಸುಪ್ರಭೇದ—ಕುಲವಾದಿಗಳ ಪಂಚಾಚಾರ್ಯೋತ್ಪತ್ತಿಯನ್ನು ಹೇಳುವ ಶವನವಲ್ಲ ಎಂಬ ಆಗಮವಚನವು ಪರಮೇಶ್ವರನು ರೂಪಗ್ರಹಣವನ್ನು ಭಕ್ತರ ಉದ್ಧಾರಕ್ಕಾಗಿ ಮಾಡುವನೆಂದು ಸ್ಥಾಪಿಸುತ್ತದೆ. ಪರಮೇಶ್ವರನು ಮೂರ್ತರೂಪವನ್ನು ಹೊಂದಲಿಕ್ಕೆ ಅನನ್ಯವಾದ ಭಕ್ತಿಬೀಜವೆಂಬುವದನ್ನು "ನಂಬರುನಚ್ಚರು ಬರಿದೆಕರವರು ನಂಬಲರಿಯರು ಲೋಕದ ಮನುಜರು ನಂಬಿಕರೆದರೆ ಓ ಎನ್ನನೆ ಶಿವನು" ಭಕ್ತಸ್ಥಳ ೧೧೬ ಎಂಬ ವಚದಿಂದ ತೋರಿಸಿರುವನು. ಈ ಭಕ್ತಿಜ್ಞಾನಗಳಿಂದ ಸಗುಣನಿರ್ಗುಣ ಸಾಕ್ಷಾತ್ಕಾರಗಳನ್ನು ಹೊಂದಬಲ್ಲವನೆ ಶಿವಭಕ್ತನೆಂಬುದನ್ನು ಬಸವನು ಹೇಳುವನು. "ಬಯಲರೂಪ ಮಾಡಬಲ್ಲವನೆ ಲಿಂಗಾನುಭವಿ ಬಯಲರೂಪ ಮಾಡಲರಿಯದಿರ್ದಾರೆಂತು ಶರಣೆಂಬೆ ಆರೂಪವ ಬಯಲಮಾಡಲರಿಯದಿರ್ದಡೆ ಎಂತು ಲಿಂಗಾನುಭವಿಯೆಂಬೆ ಈಉಭಯಬಿಂದಾದರೆ ನಿಂಮಲ್ಲಿ ತೆರಹುಂಟೆ ಕೂಡಲ ಸಂಗಮದೇವ." ಐಕ್ಯಸ್ಥಳ ೪. ಆದುದರಿಂದ ವೇದಾಗಮಾರ್ಥವನ್ನೆ ಗರ್ಭೀಕರಿಸಿದ ವಚನಗಳನ್ನಾಡಿದ ಬಸವನು ವೇದಾಗಮಂಗಳ ತಾತ್ಪರ್ಯವನ್ನು ತಿಳಿದವನಿರಬೇಕು. ಹಾಗು ಅಲ್ಲಲ್ಲಿ ಸಂಸ್ಕೃತ ಪ್ರಮಾಣಗಳನ್ನೂ ಸಾಕ್ಷಾತ್ತಾಗಿ ವೇದವಚನಗಳನ್ನೂ ಉದಾಹರಿಸಿರುವನು. ದೂಷಕ ಚಂಡಾಲನು ಈ ಉದಾಹರಣಗಳನ್ನು ಸಂಸ್ಕೃತವನ್ನರಿಯದ ಶಾಲೆಯ ಅಯ್ಯನವರು ಉದಾಹರಿಸಿದಂತಹ ಶ್ಲೋಕಗಳೆಂದು ಹಾಸ್ಯ ಮಾಡುವನು. ಚಂಡಾಳನೇ ಶ್ರೀಬಸವೇಶ್ವರನು ಈ ಶ್ಲೋಕಗಳನ್ನು ಉದಾಹರಿಸಿದಂತೆಯೆ ಈಗ ಅವುಗಳನ್ನು ಅಚ್ಚು ಹಾಕಿರುವರೊ? ಭ್ರಷ್ಟಾ, ಕೆಲವುಕಾಲದಿಂದ ವಿದ್ಯಾಹೀನರೂ ಗುಣಹೀನರೂ ಕುಲಮಾತ್ರದಿಂದ ಗುರುಗಳಾಗುತ್ತ ಬಂದು ಶ್ರೀ ಬಸವನ ವಚನಗಳನ್ನು ಅವುಗಳ ಅರ್ಥವ ತಿಳಿಯದೆ ಓದಿ ಆ ಬಸವನ ಭಕ್ತಿಮಾರ್ಗದ ದುರುಪಯೋಗದಿಂದ ಹೊಟ್ಟೆಯನ್ನು ಹೊರಕೊಂಡರು. ಈಗಂತು ಈ ಸಂಪ್ರದಾಯ ಪರಿಣಾಮವು ಪ್ರಮಥ ನಿಂದಾಸ್ವರೂಪವ ಹೊಂದಿದೆ. ಅವರ ಅಜ್ಞಾನ ವಾದಕ್ಕೆ ಬಸವನ ಸ್ತುತಿಯೇ ಈಗ ತಾ ಗಿದೆ.

“ಎಷ್ಟು ತಲೆವಾಗಿದ್ದರೇನು ಗುರುಭಕ್ತನಾಗಬಲ್ಲುದೆ?” ಎಂಬುವುದಕ್ಕೆ ಬದಲು “ಯೇತ ತಲೆವಾಗಿದರೇನು ಗುರುಭಕ್ತನಾಗಬಲ್ಲುದೆ” ಎಂದು ಈಗಿನ ಅಚ್ಚಿನ ಪ್ರತಿಯಲ್ಲಿ ಬಿದ್ದಿದೆ. ಅಂದರೆ ಶ್ರೀಮಂತ್ರಮೂರ್ತಿಗೆ ಕನ್ನಡವೂ ಬರುತ್ತಿದ್ದಿಲ್ಲ ಯೆನಬೇಕೊ? ಶ್ರೀಬಸವೇಶನು ಸಂಸ್ಕೃತವನ್ನರಿಯುತ್ತಿದ್ದರೆ ಕನ್ನಡದಲ್ಲೇಕೆ ಗ್ರಂಥವನ್ನು ಬರೆದನು ಎಂದು ಪ್ರಶ್ನವಿದೆ. ಸಂಸ್ಕೃತದಲ್ಲಿ ಬರೆಯುವುದರಿಂದ ತಾದೃಶ ಪ್ರಯೋಜನವಿರಲಿಲ್ಲ. ಶ್ರೀಬಸವಾವತಾರ ಪ್ರಯೋಜನವು ಜನ ಸಾಮಾನ್ಯಕ್ಕೆ ಉತ್ಕೃಷ್ಟವಾದ ವೀರಶೈವ ತತ್ವಗಳನ್ನು ಬೋಧಿಸಿ ಧರ್ಮಪರರನ್ನಾಗಿ ಮಾಡುವುದಿತ್ತು. ಜಿನಾದಿ ಮತಸ್ಥರು ಸಾಮಾನ್ಯ ಜನರಿಗೂ ಧರ್ಮತತ್ವಗಳು ತಿಳಿಯಬೇಕೆಂದು ಕನ್ನಡದಲ್ಲಿಯೆ ತಮ್ಮ ಪ್ರಬಂಧಗಳನ್ನು ರಚಿಸುತ್ತಿದ್ದರು. ‘ಸಂಸ್ಕೃತದಲ್ಲಿ ಗ್ರಂಥವನ್ನು ಬರೆದು ಅದಕ್ಕೆ ಟೀಕೆಯನ್ನು ಬರೆಯಬಹುದಾಗಿತ್ತಲ್ಲ ಎಂದು ಆಕ್ಷೇಪಕರ್ತನು ಅನ್ನುತ್ತಾನೆ. ಆದರೆ ಪ್ರಮಥ ನಿಂದಾಕಲುಷಿತಚಿತ್ತನೆ, ಆ ಮಹಿಮನು ಅವತರಿಸಿದ ಕಾಲದಲ್ಲಿ ಮತಪ್ರಸಾರಕ್ಕೆ ವಿಲಂಬವಾಗಲು ಮಾರ್ಗವಿದ್ದಿಲ್ಲ. ಈ ವಚನಗಳನ್ನಾದರು ಆ ವಿಭುವು ನಮ್ಮಂತೆ ರಚಿಸಿಲ್ಲ. ಆ ಧರ್ಮಪೂರ್ಣಮೂರ್ತಿಯು ಆಯಾ ಸಮಯಕ್ಕೆ ಆಡಿದ ಸ್ವಾಭಾವಿಕ ವಚನಗಳಿವು. ವೇದಕಾಲದ ಋಷಿಗಳಿಗೆ ಧರ್ಮವು ಗೋಚರಿಸಿತು. ಅತಿ ಸರಳ ಭಾಷೆಯಿಂದ ಋಕ್ಕುಗಳು ಅವರ ಬಾಯಿಂದ ಹೊರಬಿದ್ದವು. ಉದಾಹರಣೆ— ಸಹಸ್ರಂತ ಇಂದ್ರೋತಯೋ ನ ಸಹಸ್ರ ಮಿಷೋಹರಯೋ ಗೂರ್ತತಮಾಃ । ಸಹಸ್ರಂ ರಾಯೋ ಮಾದಯಧ್ಯೈ ಸಹಸ್ರಿಣ ಉಪನೋಯಂತುವಾಜಾ ॥ ಋ. ೫೫೧. ಎಲೈ ಪರಮೇಶ್ವರನೆ, ನೀನು ನಮ್ಮನ್ನು ಸಹಸ್ರ ಪ್ರಕಾರಗಳಿಂದ ರಕ್ಷಿಸುತ್ತಿ. ಭಕ್ತರ ಪಾಪಹರಣ ಶಕ್ತಿಯುಳ್ಳ ಪರಮಾತ್ಮನೆ, ನಿನ್ನ ಅಪರಿಮಿತವಾದ ಪ್ರಸಾದವು ನಮ್ಮನ್ನು ತುಷ್ಟಿಗೊಳಿಸಲಿಕ್ಕೆ ಪ್ರಾಪ್ತವಾಗಲಿ. ಅದರಂತೆಯೆ ಬಸವಪ್ರಭುವಿನ ವಾಕ್ಯಗಳಾದರು ಅತಿ ಸರಳವಾದವುಗಳಾಗಿ ಧರ್ಮ ಸ್ವರೂಪವನ್ನು ಪ್ರಕಾಶಿಸುತ್ತವೆ. ಅವುಗಳ ಸರಳತ್ವವು ವೇದಾಗಮಗಳಲ್ಲಲ್ಲದೆ ಇತರತ್ರ ತೋರದು. ಸಂಸ್ಕೃತದಲ್ಲಿ ಬರೆದಿದ್ದರೆ ಭರತಖಂಡ

ದಲ್ಲೆಲ್ಲ ಮತತತ್ವಗಳು ತಿಳಿಯುತ್ತಿದ್ದವೆಂದು ಆಕ್ಷೇಪಿಸುವೆಯಲ್ಲವೆ? ಬಸವನ ಕಾಲದಲ್ಲಿ ಕನ್ನಡ ನಾಡಿನ ಹಬ್ಬುಗೆಯು ಅತಿ ವಿಶಾಲವಾಗಿತ್ತು. ಆ ವಿಭುವಿನ ತತ್ವಗಳು ಮಹತ್ತರವಾದ ಸಿದ್ಧಾಂತವನ್ನೊಳಕೊಂಡದರಿಂದ ಅವುಗಳ ಪ್ರಸಾರವು ಆಂಧ್ರದೇಶದಲ್ಲಿ ಶ್ರೀಸೋಮಾರಾಧ್ಯನು ಮೊದಲಾದವರಿಂದ ಆದಿತು. ಹಾಗು ಸಂಸ್ಕೃತದಲ್ಲಿಯೂ ದರು ಅನೇಕ ವೀರಶೈವ ಗ್ರಂಥಗಳು ರಚಿಸಲ್ಪಟ್ಟವು. ಅನಾದಿ ವೀರಶೈವಸಾರ, ವೀರಶೈವ ವೇದಾಂತ ಚಿಂತಾಮಣಿ, ಕೈವಲ್ಯಸಾರ ಮೊದಲಾದ ಅನೇಕ ಉತ್ತಮೋತ್ತಮ ಗ್ರಂಥಗಳು ಸಂಸ್ಕೃತದಲ್ಲಾದುವು. ಅವನು ಕನ್ನಡದಲ್ಲಿ ಸಾಮಾನ್ಯ ಜನತೆಯನ್ನು ಎಚ್ಚರಿಸಿದರ ದೆಸೆಯಿಂದಲೆ ಕರ್ಣಾಟಕ ಮತ್ತು ಆಂಧ್ರ ದೇಶಗಳಲ್ಲಿಯೂ ತಮಿಳ ದೇಶದಲ್ಲಿಯೂ ಕೆಲಮಟ್ಟದಲ್ಲಿ ಮಹಾರಾಷ್ಟ್ರದಲ್ಲಿಯೂ ವಿಪುಲವಾಗಿ ವೀರಶೈವರು ದೊರೆಯುತ್ತಿರುವರು. ಆತನು ಹಾತ ಕಲಿಸಿದ ಜಂಗಮ ಭಕ್ತಿಯು ಲಾಭದಿಂದಲೆ ನಿನ್ನ ಪೋಷಕರಾದ ಮತಸ್ಥರು (?) ಆತನ ಹೆಸರಿಗೆ ಕಲಂಕವನ್ನು ಹಬ್ಬಿಸುತ್ತಿರುವರು.

ಸಂಸ್ಕೃತವು ಬರುತ್ತಿದ್ದರೆ ವೇದಾಗಮಗಳ ನಿಂದೆಯನ್ನು ಮಾಡುತ್ತಿದ್ದಿಲ್ಲವೆನ್ನುತ್ತಿ. ವೇದಾಗಮ ನಿಂದೆಯು ಇರುವುದಿಲ್ಲ. ಅಲ್ಲಲ್ಲಿ ವೇದಾಗಮವಾಕ್ಯಗಳನ್ನು ತನ್ನ ವಚನದ ಪುಷ್ಟೀಕರಣಕ್ಕಾಗಿ ತೆಗೆದುಕೊಂಡಿರುವನು. ಶಿವನಲ್ಲದೆ ಬೇರೆ ದೇವರಿಲ್ಲೆಂಬುವುದಕ್ಕೆ ಏಕೋ ರುದ್ರೋನದ್ವಿತೀಯಾಯ ತಸ್ಥುಃ ಎಂಬ ಶ್ರುತಿಯನ್ನು ದಾಹರಿಸಿರುವನು. ಶಿವನ ಅಖಂಡತ್ವಕ್ಕೆ ಅತ್ಯತಿಷ್ಠದ್ದಶಾಂಗುಲಂ ಎಂಬ ವೇದವನ್ನೋದಿರುವನು. ಮಾ. ೫ ವಿಶ್ವಕರ್ತೃವು ಶಿವನೆನ್ನುವುದಕ್ಕೆ "ದ್ಯಾವಾಭೂಮಿ ಜನಯನ್‌ದೇವ ಏಕಃ" ಎಂಬ ನಿಗಮವನ್ನು ಪ್ರಮಾಣೀಕರಿಸಿರುವನು ಮಾ. ೭೪. ವಿಪ್ರರು ವೇದವನ್ನೋದಿ ಗಾಯತ್ರಿ ಜಪನಿಷ್ಠರೆಂದುಕೊಂಡಾಗಲು ಆ ಮಂತ್ರದ ತಾತ್ಪರ್ಯವನ್ನರಿಯದೆ ಹಲವು ದೇವರನ್ನು ಭಜಿಸುತ್ತಿರರೆಂಬುದಕ್ಕೆ "ವೇದವನೋದಿದ ವಿಪ್ರರು ಹೆಸರಿಲ್ಲದೆ ಹೋದ ಕೇಡನೋಡಿರೆ ಭರ್ಗೋದೇವಸ್ಯ ಧೀಮಹಿ ಎಂಬರು ಒಬ್ಬರಿಗಾಗಿ ವಿಚಾರವಿಲ್ಲ ನೋಡಿರೆ ಕೂಡಲ ಸಂಗಮದೇವ" ಗಾಯತ್ರೀಮಂತ್ರವನ್ನೆ

ಉದಾಹರಿಸುವನು. ಎನಿಸನೋದಿದರೇನು ಎನಿಸಕೇಳಿದರೇನು ಚತುರ್ವೇದ ನೀವು ಪಾಠವಾದಡೇನು ಲಿಂಗಾಜ್ಞಾನ ಹೀನನಾದಡೆ ಶಿವ ಶಿವ ಬ್ರಾಹ್ಮಣನೆಂಬೆನೆ ಎನಲಾಗದು." ಎಂಬ ವಚನದಲ್ಲಿ ವೇದ ಶಾಸ್ತ್ರ ಪುರಾಣವು ಶಿವಸರ್ವೋತ್ತಮತೆಯನ್ನು ಹೇಳುತ್ತದೆಂಬುವಲ್ಲಿ " ಶಿವ ಏಕೋಧ್ಯೇಯಃ " ಎಂದು ಅಥರ್ವಶಿಖಾದ್ಯುಪನಿಷತ್ತುಗಳ ವಾಕ್ಯಗಳನ್ನು ಸ್ಮರಿಸಿರುವನು. ಷಡಕ್ಷರ ಮಂತ್ರ ಮಹಿಮೆಯನ್ನು ಕೊಂಡಾಡುವಾಗ ಓಂನಮಃಶಿವಾಯ ಎಂಬ ಮಂತ್ರವ ನಿೞರಲಮ್ಮದೆ ನಿಂದುದು ವೇದ. ಓಂನಮಃಶಿವಾಯ ಎಂಬ ಮಂತ್ರವ ನಿೞರಲಮ್ಮದೆ ನಿಂದುದು ಶಾಸ್ತ್ರ." ಎಂದಿಂತು ವೇದದಲ್ಲಿಯೆ ಷಡಕ್ಷರವು ಬೋಧಿಸಲ್ಪಟ್ಟಿರುವುದೆಂತಲು ವೇದ ಮಂತ್ರಗಳಲ್ಲಿ ಷಡಕ್ಷರವು ಶಿಖಾಮಣಿಯೆಂತಲು ತೋರಿಸಿರುವನು. ಷಡಕ್ಷರಮಂತ್ರವು ವೇದಸಾರವಲ್ಲವೆ ಆ ಷಡಕ್ಷರ ಮಂತ್ರಸಾರವಾದ ವೇದವನ್ನು ಬಸವೇಶನು ನಿಂದಿಸುವ ಬಗೆಯದಾವುದು? ಆದರೆ ಪತಿತರು ಕೆಲವು ವಚನಗಳನ್ನು ದಾಹರಿಸಿ ಬಸವನು ವೇದನಿಂದೆಯನ್ನು ಮಾಡಿದನೆಂದು ಬೊಗಳುವರು. ಈ ವಚನಗಳ ಪೂರ್ವಾಪರ ಸಂದರ್ಭವನ್ನು ನೋಡಿರಿ. ಶಿವಭಕ್ತನಾಗಿ ಲಿಂಗಧಾರಣವನ್ನು ಹೊಂದಿದ ಬಳಿಕ ಪೂರ್ವ ಜಾತಿಯನ್ನು ಸ್ಮರಿಸಲಾಗದು ಶಿವದೀಕ್ಷೆಯಿಂದ ಪುನರ್ಜಾತನಾಗುವನು. ಎಂದು ವೇದಾಗಮ ಪುರಾಣೇತಿಹಾಸಗಳ ಸಾರವು. " ಅಪಿವಾಯಶ್ಚಂಡಾಲಃ ಶಿವೇತಿವಾಚಂ ವದೇತ್ತೇನಸಹ ವಸೇತ್ತೇನಸಹ ವಿಶೇತ್ತೇನಸಹ ಭುಂಜೀತತೇನಸಹ ಭುಂಜೀತ್" ಎಂಬ ಸಾಮವೇದ ವಚನವು ಶಿವದೀಕ್ಷಿತನಾಗಿ ಶಿವಮಂತ್ರವನ್ನು ಹೊಂದಿ ಅವ ಚಾಂಡಲನಾದರು ಶಿವಮಂತ್ರವನ್ನು ಜಪಿಸುವನಾದರೆ- ಮಂತ್ರಲಿಂಗಗಳಿಗೆ ಏಕತ್ವವಿರುವುದರಿಂದ ಲಿಂಗಧಾರಣಶೀಲನಾಗಿ ಮಂತ್ರಜಾಪಿಯಾದರೆ- ಅವನೊಡನೆ ಒಂದೇ ಕೇರಿಯಲ್ಲಿರಬೇಕು. ಅವನೊಡನೆ ಒಂದೆ ಬಾಗಿಲಿಂದ ಹೋಗಬೇಕು. ಅವನೊಡನೆ ಏಕಪಂಕ್ತಿಯಲ್ಲುಣಬೇಕು. ಎಂಬುದಾಗಿ ನಿರ್ಣಯಿಸುತ್ತದೆ. " ಪಾಷಾಣಾದಿಕೃತಂಲಿಂಗಂ ಯಂದ್ವತ್ಪೂಜ್ಯಂ ಪ್ರತಿಷ್ಠಿತಂ । ನೀಚವಂಶೋದ್ಭವಶ್ಚಾಪಿ ಭಕ್ತಶ್ಚೇದ್ದೀಕ್ಷಿತೋಯದಿ "॥ ಶಿಲಾದಿನಿರ್ಮಿತಲಿಂಗಕ್ಕೆ ಮಂತ್ರಸಂಸ್ಕಾ

ಕಾದಿಗಳನ್ನು ಮಾಡಿ ಯಥಾವಿಧಿ ಪ್ರತಿಷ್ಠಿಸಲು ಅದು ಪಾಷಾಣವೆನಿಸದೆ ಪೂಜ್ಯವೆನಿಸುವಂತೆ ನೀಚಕುಲದವನಾದರು ಶಿವಭಕ್ತನಾದರೆ ಪೂಜ್ಯನಹನು. ಎಂಬ ಶಿವರಹಸ್ಯೇತಿಹಾಸವು. ಅದೇ ಅರ್ಥವನ್ನು ಸಾರುತ್ತದೆ. " ಭಕ್ತಸ್ಯಪ್ರಾಕ್ತನಂ ಜನ್ಮನಾಮಜಾತ್ಯಾದಿಕಂತುವಾ । ಪೃಚ್ಛೇದ್ವಾ ಕಥಯೇ ದ್ವಾಪಿ ಸರ್ವೈಪಾತಕಿನಾಂವರಃ ॥ ಎಂಬ ಸೂಕ್ಷ್ಮಾಗಮವಚನವು ದೀಕ್ಷಾಕಾಲಕ್ಕಿಂತ ಹಿಂದಿನದಾದ ಭಕ್ತನ ನಾಮವನ್ನಾಗಲಿ ಜಾತಿ ಮೊದಲಾದುದನ್ನಾಗಲಿ ಕೇಳು ಹೇಳುವವರೀರ್ವರು ಪಾತಕಿಗಳಲ್ಲಿ ಹೆಚ್ಚಿನವರೆಂದು ಸೂಕ್ಷ್ಮಾಗಮವು ಗರ್ಜಿಸುತ್ತಿದೆ. ಇವೆಲ್ಲವುಗಳ ಸಾರವನ್ನೇ ಸಂಗ್ರಹಿಸಿ ಸಿದ್ಧಾಂತ ಶಿಖಾಮಣಿಯು. " ಬ್ರಾಹ್ಮಣಃ ಕ್ಷತ್ರಿಯೋವಾಪಿ ವೈಶ್ಯೋವಾ ಶೂದ್ರ ಏವವಾ । ಅಂತ್ಯಜೋವಾಶಿವೇಭಕ್ತಃ ಶಿವವನ್ಮಾನ್ಯಏವಸಃ " ಪ್ರಸಾದಿಸ್ಥಲ ಭ ೧೦. ಬ್ರಾಹ್ಮಣನಾಗಲಿ ಕ್ಷತ್ರಿಯನಾಗಲಿ ವೈಶ್ಯನೆಯಾಗಲಿ ಅಥವಾ ಶೂದ್ರನೆಯಾಗಲಿ ಇಷ್ಟೇ ಅಲ್ಲ ಅಂತ್ಯಜನಾದರಾಗಲಿ ಶಿವಭಕ್ತನಾದರೆ ಶಿವನಂತೆಯೆ ಆತನು ವಂದ್ಯನೆಂದು ಹೇಳುತ್ತಿದೆ. ಅನಾದಿ ವೀರಶೈವ ಮತವೆ ತನ್ನ ರೂಪವಾದ ವೃಷಭೇಶನು ಇದೇ ಸಿದ್ಧಾಂತವನ್ನು ಬಲುಸರಸವಾಗಿ "ದೇವ! ನಿಂಮ ಪೂಜಿಸಿ ಚನ್ನನಕುಲ ಜನ್ಮಾಯಿತು ದೇವ! ನಿಮ್ಮ ಪೂಜಿಸಿ ದಾಸನ ಕುಲದೆಸೆಯು ನಡರಿತ್ತು ದೇವನಿಮ್ಮಡಿಗೆರಗಿದ ಮಡಿವಳಮಾಚಯ್ಯನಿಂಮಡಿಯಾದ ನೀನೊಲಿದ ಕುಲಕ್ಕೆ ನೀನೊಲಿದ ಹೊಲೆಗೆ ಮರೆಯುಂಟೇದೇವ ಇದಕ್ಕೆ ಪ್ರಮಾಣ ಶ್ರುತಿಯು ಶ್ವಪಚೋಽಪಿ ಮುನಿಃಶ್ರೇಷ್ಠೋ ಯಸ್ತುಲಿಂಗಾರ್ಚನೇರತಃ ॥ ಲಿಂಗಾರ್ಜನ ವಿಹೀನೋಯೋಬ್ರಾಹ್ಮಣಃ ಶ್ವಪಚಾಧಮಃ " ಎಂದುದಾಗಿ ಜಾತಿವಿಜಾತಿಯಾದರೇನು ಅಜಾತಂಗೆ ಶರಣೆನ್ನದಾತನೆ ಹೊಲೆಯ ಕೂಡಲಸಂಗಮದೇವ ॥ ವಾ. ೭೯. ಎಂಬ ಮುಂತಾದ ವಚನಗಳಿಂದ ಸ್ಥಾಪಿಸುತ್ತಿರುವನು. ಈ ವಚನವು ಅಮೃತವಾಣಿಯುಲ್ಲವೆ ಇದರಂತೆ ನಮ್ಮ ಸಮಾಜವು ನಡೆದಿದ್ದರೆ ಭರತಖಂಡದಲ್ಲಿರುವ ಸರ್ವಮತಗಳಿಗಿಂತಲು ಮುಂದೆ ಬರುತ್ತಿರಲಿಲ್ಲವೆ ಈ ವಚನಗಳಂತೆ ನಾವು ನಡೆಯಲಿ ನಡೆಯದಿರಲಿ ನಂಮ ಧರ್ಮಸ್ಥಾಪಕ ವಿಭುವಿನ ಈ ವಚನಗಳಿಂದಲೇ ಅಲ್ಲವೆ ನಮ್ಮ ಧರ್ಮವು ಉತ್ಕೃಷ್ಟವೆಂದು ಈಗ ಇತರರು ಸ

ಪ ಕೊಂಡಾಡುತ್ತಿರುವುದು. ಈ ಉದಾತ್ತ ತತ್ವಗಳಂತೆ ನಮ್ಮ ಆಚಾರವನ್ನಿಡುವುದಿಲ್ಲವೆ ನಾವು ಸುಧಾರಣೆಯು? ಈ ತತ್ವಗಳನ್ನು ಮರೆತುದಲ್ಲವೆ ನಂಮ ಅವನತಿಯ ಮೂಲ ಕಾರಣವು? ಇರಲಿ ಸರಳಶೈಲಿಯ ಈ ವಚನಕ್ಕೆ ಟೀಕೆಯನ್ನು ಬರೆದು ಅದರ ಸ್ವಾರಸ್ಯವನ್ನು ಕಡಿಮೆ ಮಾಡುವಲ್ಲಿ ಪ್ರಯೋಜನವಿಲ್ಲ. ವಾಚಕರು ಅದನ್ನು ಮತ್ತೊಮ್ಮೆ ಮತ್ತೊಮ್ಮೆ ಓದಿ ಜಪಿಸಲಿ. ಹೀಗೆ ಶಿವಭಕ್ತನೆ ಕುಲಜನೆಂದು ಸ್ಥಾಪಿಸುವ ಪ್ರಸಂಗದಲ್ಲಿ ಈ ಸಿದ್ಧಾಂತಕ್ಕೆ ವಿರೋಧವೆಂದು ವಾದಿಗಳು ಉದಾಹರಿಸಬಹುದಾದ ಕೆಲವು ವೇದವಾಕ್ಯಗಳನ್ನು ಕುರಿತು ಬಸವಣ್ಣನು “ ವೇದಕ್ಕೆ ಹೊರೆಯೆಕಟ್ಟುವೆ ಶಾಸ್ತ್ರಕ್ಕೆ ನಿಗಳವನ್ನಿಕ್ಕುವೆ. ತರ್ಕದ ಬೆನ್ನಬಾರನೆತ್ತುವೆನು ಆಗಮದ ಮೂಗ ಕೊಯ್ಯುವೆ. ನಮ್ಮ ಮಹಾದಾನಿ ಕೂಡಲ ಸಂಗಮದೇವ ಮಾದರ ಚೆನ್ನಯ್ಯನ ಮನೆಯಲ್ಲಿ ಉಚಿಷ್ಟಾದಿವ್ಯಕಾರಣವಶಾತ್ತಾಗಿ ॥ ವ. ೧೯೦. ಎಂದು ಆಡಿರುವನು. ಇದು ವೇದ ನಿಂದೆಯಲ್ಲ ಶಾಸ್ತ್ರದ ನಿಂದೆಯಲ್ಲ. ಆದರೆ ವೇದಾರ್ಥವನ್ನು ತಿಳಿಯಲರಿಯದೆ ವಾದಿಗಳು ಕೆಲವು ವಾಕ್ಯಗಳನ್ನು ಮುಂದು ಮಾಡುತ್ತಿರಲು ಅವರ ನಿಂದೆಯಿದು. ವೇದವು ಒಂದೆಯೊಂದು ತಾತ್ಪರ್ಯವನುಳ್ಳದು. ಹಲವು ತಾತ್ಪರ್ಯಗಳದಕ್ಕಿಲ್ಲ. ಹಾಗಿದ್ದರೆ ನಿಶ್ಚಿತತ್ವವಿರದೆ ಅನಿಶ್ಚಿತತ್ವವು ದೋಷವು ಬರುವದು. ಆದರೆ ವೇದದಲ್ಲಿ ಮಂದಮತಿಗಳಿಗೆ ತಾತ್ಪರ್ಯವು ತಿಳಿಯದೆ ಒಂದೊಂದು ಪ್ರಸಂಗಗಳಲ್ಲಿ ಅನ್ಯಾರ್ಥವಾಗಿ ಹೇಳಿದ ವೇದವಾಕ್ಯಗಳ ತಾತ್ಪರ್ಯವನ್ನು ಅನ್ಯಥಾ ತಿಳಿದುಕೊಂಡು ಅದೇಶ್ರುತಿಗಳ ಪರಮತಾತ್ಪರ್ಯವೆಂದು ವಾದಿಸುವರು ಅಂತಹ ಖಂಡನದಲ್ಲಿ ವಾದಿಗಳ ಪಕ್ಷವನ್ನು ನಿರಸನಮಾಡುವಾಗ ಅವರ ವಾಕ್ಯಗಳನ್ನೂ ಅಲ್ಲಗಳೆಯುವ ಪರಿಪಾಟವುಂಟು. ಉದಾಹರಣೆ “ ಅಪಾಮ ಸೋಮಮ ಮೃತಾ ಅಭೂಮ ” ಎಂಬ ಶ್ರುತಿಯನ್ನು ಹಿಡಿದು ಕರ್ಮಕಾಂಡಿಗಳು ಅಂದರೆ ವೇದತಾತ್ಪರ್ಯವು ಕರ್ಮದಲ್ಲಿಯೆ ಅದೆ ಉಪಾಸನವಾಗಲಿ ಜ್ಞಾನವಾಗಲಿ ಇರಲಾರದು. ಶ್ರುತಿಯು “ ನಾವು ಸೋಮವನ್ನು ಕುಡಿದೆವು ಮತ್ತು ಮರಣರಹಿತರಾದೆವು ” ಎಂದು ಹೇಳುತ್ತದೆ ಅದರಿಂದ. ಅಮೃತತ್ವಕ್ಕೆ ಅಥವಾ ಮರಣವನ್ನು ಗೆಲ್ಲುವುದೆಂಬ ಮೋಕ್ಷ

ಸ್ಥಿತಿಗೆ ಸೋಮಪಾನವು ಅಂದರೆ ಯಜ್ಞಯಾಗಾದಿಗಳನ್ನು ಮಾಡುವುದೆ ಸಾಧನವು ಎಂದು ಸಾಧಿಸುವವರು ಜ್ಞಾನಮಾರ್ಗವನ್ನು ಅಲ್ಲಗಳೆಯುವರು. ಇಂತಹ ಮನುಷ್ಯರ ಪಕ್ಷವನ್ನು ಮುಂಡಕೋಪನಿಷತ್ತು ಖಂಡಿಸುತ್ತದೆ. "ಪ್ಲವಾಹ್ಯೇತೆ ಅದೃಢಾಯಜ್ಞರೂಪಾ ಅಷ್ಟಾದಶೋಕ್ತ್ಮವರಂಯೇಷುಕರ್ಮ ಏತಚ್ಛ್ರೇಯೋಯೇಽಭಿನಂದತಿ ಮೂಢಾಜರಾಮೃತ್ಯುಂತೇ ಪುನರೇವಾಪಿಯಂತಿ ॥ ಅವಿದ್ಯಾಯಮಂ ತರೇವರ್ತಮಾನಾಃ ಸ್ವಯಂಧೀರಾಃ ಪಂಡಿತಂಮನ್ಯಮಾನಾಃ । ಜಂಘನ್ಯಮಾನಾಃ ಪರಿಯಂತಿಮೂಢಾ ಅಂಧೇನೈವ ನೀಯಮಾನಾಯಥಾಂಧಾಃ ॥ ೭-೮. ಹದಿನೆಂಟು ಹೀನ ಕರ್ಮಗಳನ್ನು ಹೇಳಿದ ಯಜ್ಞಗಳು ಸ್ಥಿರವಾದುವಲ್ಲ ನಶ್ವರವಾದವುಗಳು. ಇದೇ ಕಲ್ಯಾಣವೆಂದು ನಂಬುವ ಮೂಢರು ತಾವು ಪಂಡಿತರೆಂದು ಬಗೆದುಕೊಳ್ಳುವರು. ಆದರೆ ಅವರು ಅಮೃತರಾಗದೆ ಪುನಃ ಪುನಃ ಸಾವುಹುಟ್ಟುಗಳಿಗೀಡಾಗುವರು. ಅವಿದ್ಯೆಯಲ್ಲಿ ಸಂಚರಿಸುವರಾಗಿ ಅನೇಕ ಹೀನ ಗತಿಗಳನ್ನು ಹೊಂದುತ್ತ ಕುರುಡರು ದಾರಿ ತೋರಿಸುವ ಕುರುಡರಂತೆ ಸುತ್ತಿಸುತ್ತಿ ತೊಳಲಿ ಬಳಲುವರು. ಈ ವಾಕ್ಯದಲ್ಲಿ ವೇದವಚನಗಳನ್ನು ನಂಬಿ ಕರ್ಮಪರರಾದವರನ್ನು ಕುರುಡರೆಂತಲು, ಮೂರ್ಖರೆಂತಲು, ಸಾವಿನ ಬಾಯಿಗೆ ತುತ್ತಾದವರೆಂತಲು ನಿಂದಿಸುವುದು ವೇದನಿಂದೆಯೆ ! ವೇದೋಕ್ತ ಕರ್ಮಪರರಾದ ವೈದಿಕರನ್ನು ನಿಂದಿಸುವುದರಿಂದ ಈ ಉಪನಿಷತ್ತು ಅವೈದಿಕವೆಂದು ವಾದಿಸಬಹುದೊ? ಋಗ್ವೇದದಲ್ಲಿ ಉದಿತ ಹೋಮ ಮತ್ತು ಅನುದಿತ ಹೋಮಗಳು ವಿಧಿಸಲ್ಪಡುತ್ತವೆ. ಉದಿತ ಹೋಮವೆಂದರೆ ಸೂರ್ಯೋದಯದ ನಂತರದಲ್ಲಿ ಹೋಮವ ಮಾಡುವುದು. ಅನುದಿತ ಹೋಮವೆಂದರೆ ಸೂರ್ಯೋದಯಕ್ಕಿಂತ ಮೊದಲು ಹೋಮವನ್ನು ಮಾಡುವುದು. ಅನುದಿತ ಹೋಮವಿಧಾಯಕವು ತದ್ವಿಪರೀತವು.

(ಅದರಂತೆಯೆ "ಅಶ್ವಃ ಶ್ಯಾವೋ(ರುಕ್ಮಲಲಾಟೋ ದಕ್ಷಿಣಾ" ) ಕುದುರೆಯ ಮರಿಯು ಹಣೆಯನ್ನು ಬಂಗಾರದಿಂದಲಂಡುದುಕರಿಸಿದಕ್ಷಿಣೆಯು. ಎಂದು ಉಪಹ್ವಯದಲ್ಲಿ ವಿಹಿತವಾದ ಅಶ್ವದಾನವು ಸೋಮಚ

ಮುಷಡಾನ ವಾಕ್ಯದಿಂದ ತೆಗೆಹು ಹಾಕಲ್ಪಡುತ್ತದೆ. ಆ ಪ್ರಸಂಗದಲ್ಲಿ " ಯತ್ಪಶೂನ್ನದದ್ಯಾತ್ ಸೋನೃತಂ ಕುರ್ಯಾತ್ " ಪಶುದಾನವನ್ನಾವನು ಮಾಡುವನೋ ಆತನು ಸುಳ್ಳು ಕಾರ್ಯವನ್ನು ಮಾಡುವನು ಎಂದು ಪಶುದಾನವೆ ನಿಂದಿಸಲ್ಪಡುತ್ತದೆ. ಅಷ್ಟರಿಂದ ಈ ಶ್ರುತಿ ವಾಕ್ಯವು ವೇದ ನಿಂದಕವಾದುದರಿಂದ ಅಪ್ರಮಾಣವೆನಬಹುದೊ ? ಇದಕ್ಕೆ ಪೂರ್ವಮೀಮಾಂಸಕರು " ನಹಿ ನಿಂದಾ ನಿಂದ್ಯಾ ನಿಂದಿತುಂ ಪ್ರವರ್ತತೇ ಕಿಂತು ವಿಧೇಯಂ ಸ್ತೋತುಂ " ನಿಂದೆಯು ನಿಂದ್ಯವೆನ್ನುವ ಪದಾರ್ಥವನ್ನು ನಿಂದಿಸಲಿಕ್ಕೆ ತೊಡಗುವುದಿಲ್ಲ. ಆದರೆ ವಿಧಿಸಿ ತಕ್ಕುದನ್ನು ಸ್ತುತಿಸಲಿಕ್ಕಿರುತ್ತದೆ. ಉದಿತ ಹೋಮವನ್ನು ಮಾಡಬೇಕೆಂಬುದು ಮತ್ತೊಂದು ವಾಕ್ಯವು. ಉದಿತ ಹೋಮವನ್ನು ಹೇಳುವ ಪ್ರಕರಣದಲ್ಲಿ ಅನುದಿತ ಹೋಮನಿಂದೆಯು ಕಂಡು ಬರುತ್ತದೆ. ಅನುದಿತ ಹೋಮವನ್ನು ಹೇಳುವ ವಾಕ್ಯದಲ್ಲಿ ಉದಿತ ಹೋಮದ ನಿಂದೆಯು ಕಂಡು ಬರುತ್ತದೆ. ಈ ನಿಂದೆಯು ಅನುದಿತ ಹೋಮವನ್ನಾಗಲಿ, ಉದಿತ ಹೋಮವನ್ನಾಗಲಿ ನಿಂದಿಸಲಿಕ್ಕಿರುವುದಿಲ್ಲ. ಆದರೆ ಮೊದಲಿನ ವಾಕ್ಯದಲ್ಲಿರುವ ಉದಿತ ಹೋಮವನ್ನೂ ಎರಡನೆಯ ವಾಕ್ಯದಲ್ಲಿರುವ ಅನುದಿತ ಹೋಮವನ್ನೂ ಸ್ತುತಿಸಲಿಕ್ಕೆ ಈ ನಿಂದೆಗಳಿರುವುವು. ಅಂದರೆ ಆಯಾ ಹೋಮಕ್ಕೆ ಅಧಿಕಾರಿಯಾದಾತನು ಇತರ ಹೋಮವನ್ನು ಆ ನಿಂದೆಯಿಂದ ಮಾಡಬಾರದೆಂಬ ಬುದ್ಧಿಯುಳ್ಳವನಾಗಿ ತನಗುಚಿತವಾದ ಹೋಮದಲ್ಲಿ ತೊಡಗುವನು. ಅದರಂತೆ ಎರಡನೆಯ ಉದಾಹರಣದಲ್ಲಿ ಸೋಮಚಮಸವನ್ನು ದಾನ ಮಾಡುವ ಪ್ರಸಕ್ತಿಯಲ್ಲಿ ಅಶ್ವದಾನವನ್ನು ಮಾಡದೆ ಸೋಮಚಮಸವನ್ನೆ ದಾನ ಮಾಡಬೇಕೆಂದು ಫಲಿತವಾಗುತ್ತದೆ. ಇದೇ ತತ್ವವನ್ನು " ನಿಂದೇಯಂ ನಿಷೇಧಾಯ ಚಮಸಃ ಸ್ತುತಮೇತ್ಯಸೌ " ಎಂದು ಸಾಯಣ ಮಾಧವನು ಜೈಮಿನೀಯ ನ್ಯಾಯಮಾಲಾ ವಿಸ್ತರದಲ್ಲಿ ಹೇಳಿರುವನು. ಅದರಂತೆಯೆ ಬಸವೇಶನ ಉಕ್ತಿಯು. ಲಿಂಗಾಯತರಲ್ಲಿ ಜಾತಿಭೇದವನ್ನು ಮಾಡಬಾರದೆಂಬ ನಿಷೇಧವನ್ನು ಸ್ತುತಿಸಲಿಕ್ಕೆ ಜಾತಿಭೇದವಿಧಾಯಕ ವಾಕ್ಯಗಳ ನಿಂದೆಯುಂಟು. ಜಾತಿಭೇದವನ್ನು ಹೇಳುವ ವಾಕ್ಯಗಳ ತಾತ್ಪರ್ಯವು ಲಿಂಗಧಾರಿಗಳಲ್ಲದವರ ವಿಷಯಕ್ಕದೆ

ಎಂಬ ತಿಳುವಳಿಕೆ ಇಲ್ಲದೆ ಲಿಂಗವಂತರಾದ ವೀರಶೈವರಲ್ಲಿಯೂ ಆ ವಾಕ್ಯಗಳಿಂದ ಜಾತಿಭೇದವನ್ನು ಕಲ್ಪಿಸುವುದು ತಪ್ಪು ಎಂದು ತಿಳಿಸುವುದಕ್ಕಾಗಿ ಮತ್ತು ಶಿವಭಕ್ತರಲ್ಲಿ ಭೇದಬುದ್ಧಿಯನ್ನು ಮಾಡದಿರುವುದು ಧರ್ಮವೆಂದು ಅಭೇದಬುದ್ಧಿಯನ್ನು ಸ್ತುತಿಸಲಿಕ್ಕಾಗಿ ಈ ತೆರದ ನಿಂದೆಯುಂಟು. ಇತರ ವೇದದಲ್ಲಿಯೆ ಈ ಪ್ರಕಾರದ ನಿಂದಾವಚನಗಳಿರುವುದು ಪ್ರಶಸ್ತಿದ್ಯೋತಕವಾಗಿರಲಿ. ವೇದವಾಕ್ಯಗಳಲ್ಲಿ ಹೇಳಿದ ಅರ್ಥದ ವಿಷಯವಾಗಿ ಸ್ಮೃತಿಪುರಾಣೇತಿಹಾಸಗಳಲ್ಲಿಯೂ ವಚನಗಳಲ್ಲಿಯೂ ನಿಂದೆ ಇರಲಾರದೆಂದರೆ ಇಂತಹ ನಿಂದೋಕ್ತಿಗಳು ವಿಪುಲವಾಗಿರುವವು. " ವಿಷ್ಣೋರ್ನುಕಂ ವೀರ್ಯಾಣಿ ಪ್ರವೋಚಂ ಯಃ ಪಾರ್ಥಿವಾನಿ ವಿಮಮೇರಜಾಂಸಿ । ಯೋ ಅಸ್ಕಭಾಯದುತ್ತರಂ ಸಧಸ್ಥಂ ವಿಚಕ್ರಮಾಣಸ್ತ್ರೇಧೋರುಗಾಯಃ ॥ ಋ. ೨. ೧-೨೪. ಎಲೈ ಮನುಜರೆ ನಾನು ಕ್ಷಿಪ್ರವಾಗಿಯೆ ವಿಷ್ಣುವಿನ ವೀರ್ಯಯುಕ್ತವಾದ ಕರ್ಮಗಳನ್ನು ಕೊಂಡಾಡುವೆನು. ವಿಷ್ಣುವು ಕ್ಷಿತ್ಯಾದಿ ಲೋಕತ್ರಯಾಭಿಮಾನಿಗಳಾದ ಅಗ್ನಿವಾಯ್ವಾದಿತ್ಯರನು ಹುಟ್ಟಿಸಿದನು. ಆ ವಿಷ್ಣುವೆ ಈ ಲೋಕದ ಉಪರಿಭಾಗದಲ್ಲಿ ಪುಣ್ಯಕೃತರು ವಾಸಮಾಡುತ್ತಿರುವ ಶ್ರಮಸಾಧ್ಯನವಾದ ಅಂತರಿಕ್ಷವನ್ನಾದರು ನಿರ್ಮಿಸಿದನು. ಎಂದು ಮೊದಲಾಗಿ ಋಗ್ವೇದದೊಂದು ಋಕ್ಕು ವಿಷ್ಣುವನ್ನು ಜಗತ್ಕರ್ತೃವೆಂದು ಹೊಗಳುತ್ತದೆ. ಈ ವಿಧದಲ್ಲಿ ವಿಷ್ಣುಗೆ ಜಗತ್ಕರ್ತೃತ್ವನ್ನು ಶ್ರುತಿಯು ಅತನು ಶಿವಶಕ್ತಿಯಂಶವಾದುದರಿಂದ ಹೇಳುತ್ತದೆಂಬರಹಸ್ಯವನ್ನರಿಯದೆ ವೈಷ್ಣವರು ವಿಷ್ಣುಸರ್ವೋತ್ತಮತೆಯನ್ನು ಸಾಧಿಸುತ್ತಿರಲು ಆ ಶ್ರುತಿ ವಿರುದ್ಧವಾದ ವಾದವನ್ನು ಮಾಣಿಸುವಲ್ಲಿ ವ್ಯಾಸನು ಸೂತಸಂಹಿತೆಯಲ್ಲಿ " ಯಥಾಸ್ಯಾಪಾನಯೋಃ ಸಾಮ್ಯಂ ಭಿದ್ರತೋಽಪಿ ನವಿದ್ಯತೇ । ತಥೈಕತ್ವೇಽಪಿ ಸರ್ವೇಷಾಂ ರುದ್ರಸಾಮ್ಯಂ ನವಿದ್ಯತೇ ॥ ಸೂ. ಗೀ. ಅ. ೨ ಶ್ಲೋ. ೬೫ ॥ ಬ್ರಹ್ಮವಿಷ್ಣುರುದ್ರರು ಈಶ್ವರಕೋಟಿಯಲ್ಲಿ ಬರುತ್ತಾರೆ. ಆದರೆ ಅಷ್ಟರಿಂದ ಅವರಲ್ಲಿ ಪರಸ್ಪರ ಸಮತ್ವವನ್ನು ಹೇಳಲಾಗದು. ದೇಹದಲ್ಲಿ ಮುಖವೊಂದು ಛಿದ್ರವು, ಗುದವೊಂದು ಛಿದ್ರವು. ಎರಡೂ ಛಿದ್ರಗಳೇ. ಆದರೆ ಗುದ ಛಿದ್ರವು ಮುಖ

ಚ್ಛಿದ್ರಕ್ಕೆ ಸಮಾನವೆನಲಾಗದು. ಅದರಂತೆಯೆ ರುದ್ರನಿಗೆ ಉಳಿದ ಬ್ರಹ್ಮವಿಷ್ಣುಗಳು ಸಮಾನರೆನಲಿಕ್ಕಾಗದು ಎಂಬೀ ವಾಕ್ಯದಿಂದ ವಿಷ್ಣುವನ್ನು ಅಪಾನ ಛಿದ್ರಕ್ಕೆ ಹೋಲಿಸಿರುವನು. ಹೀಗೆ ವಿಷ್ಣುವಿಗೆ ಹೀನವಾದ ಉಪಮಾನವನ್ನು ಕೊಟ್ಟಿರುವಲ್ಲಿ ವೇದವ್ಯಾಸನು ಋಗ್ವೇದದ ವೈಷ್ಣವ ಋಕ್ಕನ್ನು ಶ್ರೀಬಸವನು ಜಾತಿಭೇದಕ ಋಕ್ಕುಗಳನ್ನು ಹೇಗೊ ಹಾಗೆ ಋಚ್ಛೀಕರಿಸಲಿಲ್ಲವೊ ? ಅದೇ ಶಿವಭಕ್ತಪಾರಮ್ಯವೆಂಬ ಶ್ರುತಿಯ ಪರಮ ಸಿದ್ಧಾಂತವನ್ನು ಪ್ರತಿಪಾದಿಸಲಿಕ್ಕಾಗಿ ಶ್ರೀಬಸವೇಶನ ತತ್ವವನ್ನೇ ಋಷಿಗಳಿಗೆ ಸೂತನು ಹೇಳುವುದನ್ನು ಕೇಳಿರಿ—

“ ಮೇರುಪಾರ್ಶ್ವೇ ತಪಸ್ತಪ್ತ್ವಾ ದೃಷ್ಟ್ವಾ ಶಂಭುಂ ಜಗದ್ಗುರುಂ। ಅಯಮರ್ಥೋ ಮಯಾ ಜ್ಞಾತಸ್ತಸ್ಯ ಪ್ರಸಾದತಃ ॥ ತದಾಜ್ಞಯೈವ ವಿಪ್ರೇಂದ್ರಾಃ ಸಂಹಿತೇಯಂ ಮಯೋದಿತಾ॥ ಅಹಂಸೂತೋಪಿಯುಷ್ಮಾಕಂ ಮಹತಾಮಪಿ ದೇಶಿಕಃ। ಅಭವಂ ಸಾಶಿವಸ್ಯಾಜ್ಞಾ ಲಂಘನೀಯಾ ನಕೇನಚಿತ್ ॥ ಶಿವಸ್ಯಾಜ್ಞಾಬಲಾದ್ವಿಷ್ಣುರ್ಜಾಯತೇ ಮ್ರಿಯತೇಽಪಿಚ ॥ ಬ್ರಹ್ಮಾ ಸರ್ವಜಗತ್ಕರ್ತಾ ವಿರಾಟ್ಸಮ್ರಾಟ್ಸ್ವರಾಡಪಿ ॥ ಪುರೋಽಸ್ಮತ್ತರವಃ ಕ್ಷುದ್ರಾ ಬ್ರಹ್ಮವಿಷ್ಣ್ವಾದಯೋಽಭವನ್ ॥ ತಸ್ಮಾದ್ಗುರುತ್ವಂ ಮೇ ವಿಪ್ರಾ ಯುಜ್ಯತೇ ನಹಿ ಸಂಶಯಃ ॥ ಶಿಷ್ಯತ್ವಂ ಚಾಪಿ ಯುಷ್ಮಾಕಂ ಸ್ವತಂತ್ರಃ ಖಲು ಶಂಕರಃ ॥ ಮಹಾದೇವಸ್ಯ ಭಕ್ತಾಶ್ಚ ತದ್ಭಕ್ತಾ ಅಪಿ ದೇಹಿನಃ। ಸ್ವತಂತ್ರಾ ವೇದವಿಚ್ಛ್ರೇಷ್ಠಾಃ ಕಿಂಪುನಃ ಸ ಮಹೇಶ್ವರಃ ॥ ಸೂ. ಅ. ೩, ಶ್ಲೋ. ೨-೮೭.

ಮೇರುಪಾರ್ಶ್ವದಲ್ಲಿ ತಪಸ್ಸನ್ನಾಚರಿಸಿ ಜಗದ್ಗುರುವಾದ ಶಂಭುವನ್ನು ಕಂಡು ಆತನ ಅನುಗ್ರಹದಿಂದ ನನಗೆ ಈ ವಿಷಯವು ತಿಳಿದಿತು. ಬ್ರಾಹ್ಮಣ ಶ್ರೇಷ್ಠರೆ, ಆತನ ಅಪ್ಪಣೆಯಿಂದಲೆ ನಾನೀ ಸಂಹಿತೆಯನ್ನು ಹೇಳಿದೆನು. ಹಾಗು ನಾನು ಸೂತನಾದುದರಿಂದ ಕ್ಷುದ್ರನಾದರು ಬ್ರಾಹ್ಮಣರಾಗಿ ಮಹಾತ್ಮರಾದ ನಿಮಗೂ ಶಿವಾಜ್ಞೆಯಿಂದಲೆ ಗುರುವಾಗಿರುವೆನು. ಶಿವನಪ್ಪಣೆಯನ್ನಾರು ಮೀರಲಾರರು. ಶಿವಾಜ್ಞೆಯ ಬಲದಿಂದ ಬ್ರಹ್ಮಸ್ವರಾಟ್ಸಮ್ರಾಡ್ವಿರಾಡ್ದೇವತೆಗಳು ಹುಟ್ಟುವರು ಸಾಯುವರು.

ಕ್ಷುದ್ರ ಜೀವಿಗಳಾದ ಕತ್ತೆ ಒಂಟೆಗಳಷ್ಟೆ ಏಕೆ ಸ್ಥಾವರ ಜೀವಿಗಳಾದ ವೃಕ್ಷಗಳಾದರು ಶಿವಾಜ್ಞೆಯಿಂದ ಬ್ರಹ್ಮವಿಷ್ಣ್ವಾದಿ ಪದವನ್ನು ಹೊಂದಿದುವು. ಆದುದರಿಂದ ನನ್ನ ಗುರುತ್ವವೂ ನಿಮ್ಮ ಶಿಷ್ಯತ್ವವೂ ಯೋಗ್ಯವೆ. ಶಂಕರನು ನಿಶ್ಚಯವಾಗಿಯು ಸ್ವತಂತ್ರನು. ವೈದಿಕ ತತ್ವಗಳನ್ನರಿತವರಲ್ಲಿ ಹೆಚ್ಚಿನವರಾದ ಮುನಿಗಳೆ ಮಹಾದೇವನ ಭಕ್ತರು ಸ್ವತಂತ್ರರಿರುವಲ್ಲಿ ಆ ಮಹೇಶ್ವರನು ಸ್ವತಂತ್ರನೆಂದು ಬೇರೆ ಹೇಳಲುಂಟೆ! "ವರ್ಣಾನಾಂಬ್ರಾಹ್ಮಣೋಗುರುಃ" ಎಂಬ ಶ್ರುತಿಯು ಇದ್ದರು. "ಅಸಿವಾಯಶ್ಚಂಡಾಲಃ" ಇತ್ಯಾದಿ ಮೇಲುದಾಹರಿಸಿದ ಶ್ರುತಿಯಿಂದ ಸೂತನು ಮುನಿಗಳಿಗೆ ಗುರುವಾಗಿರುವೆನೆಂದು ಹೇಳಿರುವನು. ಇದರಿಂದ ವೇದ ನಿಂದೆಯಾಗದೆ ವೇದದ ಭೂಷಣವೆ ಆಗುತ್ತದೆ. ಸೂತಜಾತಿಯು ಬ್ರಾಹ್ಮಣ ಜಾತಿಗೆ ಸಾಮಾನ್ಯನಿಯಮದಿಂದ ಗುರುವಾಗಲಾರದಾದರು ಶಿವಭಕ್ತಿ ಮಹಿಮೆಯಿಂದ ಸೂತನು ಬ್ರಾಹ್ಮಣರಿಗೆ ಗುರುವಾದಬಳಿಕ "ವರ್ಣಾನಾಂ ಬ್ರಾಹ್ಮಣೋಗುರುಃ" ಎಂದು ಶ್ರುತಿಗೆ ಹೊರಗಟ್ಟಿದಂತಾಗಲಿಲ್ಲವೊ? ಶ್ರೀಬಸವನಾದರು ಶಿವಾಜ್ಞೆಯಿಂದಲೆ ವೇದದ ಜಾತಿಭೇದವಿಧಾಯಕ ವಾಕ್ಯಗಳಿಗೆ ಹೊರಗಟ್ಟಿರುವೆನೆಂದು "ನಂಮ ಮಹಾದಾನಿ ಕೂಡಲ ಸಂಗಮದೇವ ಮಾದರ ಚನ್ನಯ್ಯನ ಮನೆಯಲ್ಲಿಉಂಡ ನಾದಿವ್ಯಕಾರಣವಶಾತ್ತಾಗಿ" ಎಂಬೀ ಉಕ್ತಿಗಳಿಂದ ಸ್ಪಷ್ಟೀಕರಿಸಿರುವನು. ಅಂದರೆ ಶಿವನು ಕೇವಲ ತನ್ನ ಆಗಮ ವಚನಗಳಿಂದ ಶಿವಭಕ್ತರಲ್ಲಿ ಜಾತಿ ಇಲ್ಲೆಂದು ಹೇಳಲಿಲ್ಲ. ಆದರೆ ಸಾಕ್ಷಾಲ್ಲಿಂಗಮರೂಪದಿಂದೈದಿ ಚನ್ನಯ್ಯನ ಮನೆಯಲ್ಲುಂಡು ಶಿವದೀಕ್ಷಾ ಸಂಪನ್ನರಲ್ಲಿ ಜಾತಿಭೇದವಿರಲಾರದೆಂದು ತೋರಿಸಿದ ಕಾರಣದಿಂದ ಜಾತಿಭೇದವಿಧಾಯಕ ಶ್ರುತಿಗಳಿಂದವೀರಶೈವರಲ್ಲಿ ಜಾತಿಭೇದವು ಸಿದ್ಧವಾಗಲಾರದೆಂದು ಹೇಳಿರುವನು. ಇದೇ ರೀತಿಯಾಗಿ ಅದ್ವೈತವಾದಿಗಳು ಕರ್ಮಕಾಂಡದ ಮತ್ತು ದ್ವೈತ ಪರವಾದ ವಾಕ್ಯಗಳಿಗೂ ದ್ವೈತವಾದಿಗಳು ಅದ್ವೈತ ಪರವಾಕ್ಯಗಳಿಗೂ ಹೊರಗಟ್ಟುವರು. ಆಯಾ ಮತಸಿದ್ಧಾಂತ ಸ್ಥಾಪಕರು ಆ ಸಿದ್ಧಾಂತಕ್ಕೆ ವಿರೋಧವೆನಿಸಬಹುದಾದ ವಾಕ್ಯಗಳಿಗೆ [illegible] ತಂಮ ಸಿದ್ಧಾಂತವನ್ನು ಪು

ಧಿಕ್ಕರಿಸುವುದಲ್ಲವೆ ವೇದಕ್ಕೆ ಹೊರೆಗಟ್ಟೋಣವು! ದ್ವೈತಪರವಾಕ್ಯಗಳಿಗೆ ಅರ್ಥವನ್ನು ಶಂಕರಾಚಾರ್ಯರು ಮಾಡಿದ ವಿವರವನ್ನು ನೋಡಿರಿ. "ತಮೇತಮವಿದ್ಯಾಖ್ಯಮಾತ್ಮಾನಾತ್ಮನೋರಿತರೇತರಾಧ್ಯಾಸಂ ಪುರಸ್ಕೃತ್ಯ ಸರ್ವೇ ಪ್ರಮಾಣಪ್ರಮೇಯ ವ್ಯವಹಾರಾ ಲೌಕಿಕಾ ವೈದಿಕಾಶ್ಚ ಪ್ರವೃತ್ತಾಃ ಸರ್ವಾಣಿಚ ಶಾಸ್ತ್ರಾಣಿ ವಿಧಿಪ್ರತಿಷೇಧ ಮೋಕ್ಷಪರಾಣಿ ॥ ಶಾರೀರಭಾಷ್ಯ ಉಪೋದ್ಘಾತ" ಈ ಅವಿದ್ಯೆಯು ಇರಲಾರದೆಂಬ ಬಗ್ಗೆ ಆಕ್ಷೇಪಗಳನ್ನು ಸಮಾಧಾನ ಪಡಿಸಿ ಅದರ ಲಕ್ಷಣವನ್ನು ತಿಳಿಸಿದೆವು. ಅವಿದ್ಯೆಯೆಂದರೆ ಆತ್ಮನಲ್ಲಿ ಅನಾತ್ಮಬುದ್ಧಿ, ಅನಾತ್ಮದಲ್ಲಿ ಆತ್ಮಬುದ್ಧಿ ಎಂಬುವುದಕ್ಕಿಂತ ಬೇರೆಯಾಗಿಲ್ಲ. ಅದನ್ನು ಮುಂದು ಮಾಡಿ ಲೌಕಿಕ ವೈದಿಕ ಪ್ರಮಾಣ ಪ್ರಮೇಯಗಳು ವಿಧಿನಿಷೇಧ ಮೋಕ್ಷಪರ ಶಾಸ್ತ್ರಗಳೂ ನಡೆದಿರುವುವು. ಇದರಲ್ಲಿ ಶಂಕರಾಚಾರ್ಯರು ವೇದವು ಅಜ್ಞಾನಮೂಲವೆಂದು ಹೇಳಿರುವರು. ಇಷ್ಟರಿಂದ ಅವರು ಅವೈದಿಕರೆನಬಹುದೊ? ಅದ್ವೈತ ತಾತ್ಪರ್ಯವನ್ನು ತಿಳಿಯದವರು ಅವರ ಈ ವಾಕ್ಯದಿಂದ ಶಂಕರಾಚಾರ್ಯರಿಗೆ ಪ್ರಚ್ಛನ್ನ ಬೌದ್ಧನೆನ್ನುವುದು. (ಬುದ್ಧರು ವೇದಗಳಿಗೆ ಪ್ರಾಮಾಣ್ಯವನ್ನೊಪ್ಪುವುದಿಲ್ಲ.) ಎಷ್ಟು ಸಮಂಜಸವೊ ಅಷ್ಟೇ ಸಮಂಜಸವಾಗಿ ದುರುಳರು ಶ್ರೀಮದನಾದಿ ವೃಷಭೇಶನ ಪರಾವತಾರನಾದ ಬಸವಣ್ಣನಿಗೆ ಈ ನಿಂದೆಯನಾಡುವರು. ಆದುದರಿಂದ ಶ್ರೀಬಸವೇಶನನ್ನು ವೇದಾಗಮಗಳು ತನಗೆ ತಿಳಿಯದರಿಂದ ಅವುಗಳನ್ನು ನಿಂದಿಸುವನೆಂದು ದ್ರಾಕ್ಷಿಯ ಬಳ್ಳಿಯ ಹಣ್ಣುಗಳು ಸಿಗದನರಿಗೆ ಹೋಲಿಸವುದಕ್ಕಿಂತ ನಮ್ಮ ಕಾಶೀನಾಥನನ್ನು ಬಸವದಿನಮಣಿಯ ಪ್ರಖರ ಕಿರಣಗಳನ್ನು ತಾಳದ ಗೂಗೆಯನ್ನುವುದು ಉಚಿತವು.

ಬಸವನು ಸಕಲ ವೇದಾರ್ಥವನ್ನೊಳಕೊಂಡ ವಾದವನ್ನು ಕನ್ನಡದಲ್ಲಿಯೆ ಮಾಡಿದನು. ಸಂಸ್ಕೃತದ ಅಜ್ಞಾನದಿಂದಲ್ಲ. ತನ್ನ ವೇದಸಂಮಿತ ಕರ್ಣಾಟಕ ಭಾಷೆಯಿಂದಲೆ ಜನ ಸಾಮಾನ್ಯದಲ್ಲಿ ಧರ್ಮಜಾಗೃತಿಯನ್ನು ಮಾಡಬೇಕಾಗಿದ್ದಿತ್ತು. ಕರ್ಣಾಟಕ ಭಾಷೆಯು

ಸಾಮಾನ್ಯವಾದುದಲ್ಲ. ಅದನ್ನಿಷ್ಟು ಹೀಯಾಳಿಸುವುದು ಕಾಶೀನಾಥನಂಥ ಪಂಡಿತನಿಗೇ ಪ್ರಾಪ್ತವಾದೆ. ಭಟ್ಟಾಕಲಂಕನು ಕರ್ಣಾಟಕ ವಾಣಿಯ ಮಹತ್ವವನ್ನರಿತು ಸಂಸ್ಕೃತ ಪಂಡಿತರಿಗೆ ಈ ಭಾಷೆಯು ಬರಲೆಂದು ಶಬ್ದಾನುಶಾಸನವೆಂಬ ಕರ್ಣಾಟಕ ವ್ಯಾಕರಣ ಗ್ರಂಥವನ್ನು ಸಂಸ್ಕೃತದಲ್ಲಿ ರಚಿಸಿರುವನು.

ಕನ್ನಡದಲ್ಲಿ ವಾದ ಮಾಡಿದ್ದರೆ ಸಂಸ್ಕೃತವು ಬರುತ್ತಿದ್ದಿಲ್ಲವೆಂದು ಸಿದ್ಧವಾಗುತ್ತದೆಂದು ಕಾಶೀನಾಥನ ಪರಮ ಶಿಷ್ಯನಾದ ಶಾಂತಪ್ಪನು, ಅಲ್ಲಲ್ಲ ಶಾಂತಪ್ಪನ ಹೆಸರಿನಿಂದ ಗಳಹುತ್ತಿರುವ ಕಾಶೀನಾಥನು ವಾದಿಸುವನಲ್ಲವೆ? ಸಂಸ್ಕೃತದಲ್ಲಿ ಪಾಂಡಿತ್ಯವನ್ನು ಹೊಂದಿದ ಸಂಸ್ಕೃತ ಕವಿಗಳಾದ ತ್ರಿಷಷ್ಟಿಕರ್ತರಾದಿಗಳು ಕನ್ನಡದಲ್ಲಿ ಗ್ರಂಥಗಳನ್ನು ಬರೆದಿಲ್ಲವೋ? ಮೂರ್ಖಶಿಖಾಮಣಿಯೆ ಸಂಸ್ಕೃತದಲ್ಲಿ ಇಷ್ಟು ಪಕ್ಷಪಾತವನ್ನು ತೋರಿಸಿ ಕೊಂಡರೆ ನಿನಗೆ ಸಂಸ್ಕೃತವು ಬರುತ್ತದೆಂದಾರು ನಂಬುವುದಿಲ್ಲ ಕಂಡಿಯಾ? ನಿನ್ನ ಪಾಂಡಿತ್ಯವು ಈ ನಿನ್ನ ಕುತ್ಸಿತ ಪ್ರಶ್ನೆಗಳಿಂದ ತಿಳಿಯುತ್ತದೆ. ಸಂಸ್ಕೃತ ಶಾಸ್ತ್ರವು ನಿನಗೆ ಬರುತ್ತಿದ್ದರೆ, ವೀರಶೈವ ಧರ್ಮತಾತ್ಪರ್ಯವು ನಿನಗೆ ಮಸಕು ಮಸಕಾಗಿಯಾದರು ಕಾಣಿಸುತ್ತಿದ್ದರೆ, ಈ ನಿನ್ನ ಅಬದ್ಧ ಪ್ರಶ್ನೆಗಳು ಹೊರಡುತ್ತಿದ್ದಿಲ್ಲ.

“ಬಸವನು ಚಿಕ್ಕವಯಸ್ಸಿನಲ್ಲಿ ವಾದ ಮಾಡಿಲ್ಲ. ಗ್ರಂಥಕರ್ತರು ವ್ಯರ್ಥವಾಗಿ ಬರೆದಿರುವರು. ಚಿಕ್ಕ ವಯಸ್ಸಿನಲ್ಲಿಯೆ ಬಸವನಿಗೆ ಇಂಥ ಘನತರವಾದ ಪಾಂಡಿತ್ಯವು ನಿಜವಾಗಿ ಲಭಿಸಿದ್ದ ಪಕ್ಷದಲ್ಲಿ ಇವನ ಕೀರ್ತಿಯು ಇಡೀ ಭರತ ಖಂಡದಲ್ಲಿ ಶ್ರೀಶಂಕರಾಚಾರ್ಯರೇ ಮೊದಲಾದವರಿಗಿಂತ ಹೆಚ್ಚಾಗಿ ಹಬ್ಬುತ್ತಿತ್ತು. ಇವನ ಹೆಸರು ಸೊಲ್ಲಾಪುರ ದಾಟಿದ ಮೇಲೆ ಯಾರಿಗೂ ಗೊತ್ತಿಲ್ಲ. ಅಂದಮೇಲೆ ಇವನಲ್ಲಿ ಗ್ರಂಥಕಾರರು ವರ್ಣನ ಮಾಡಿದಂಥ ಘನತರವಾದ ಪಾಂಡಿತ್ಯವಿದ್ದಿಲ್ಲವೆಂದು ಸಿದ್ಧವಾಗುವುದಷ್ಟೆ ಎಂದು ವಾದಿಸುತ್ತೀಯಲ್ಲ? ಇನ್ನೊಮ್ಮೆ ಈ ಆಕ್ಷೇಪವನ್ನು ನಿನ್ನ ಮನಸ್ಸಿನಲ್ಲಿಯೆ ಮನನ ಮಾಡಿಕೊ. ನಿನ್ನ ಹೃದಯದಲ್ಲಿದ್ದ ಸನಾತನನಾದ ಪರಮೇಶ್ವರನು ಬಸವ

ನು ಪಂಡಿತರೊಡನೆ ಮಾಡಿದನೆಂದು ಗ್ರಂಥಕರ್ತರು ವರ್ಣಿಸಿರುವ ವಾದವು ಸರ್ವೋತ್ಕೃಷ್ಟವೆಂದು ನಿನಗೆ ತಿಳಿಸುತ್ತಾನೆ. ಆದರೆ ನಿನ್ನ ಪಾಪವು ನಿನ್ನಲ್ಲಿ ವಿಕಲ್ಪಗಳನ್ನು ಹುಟ್ಟಿಸುತ್ತದೆ. ನೀನು ಅನ್ನುವಂತೆ ಬಸವೇಶ್ವರನು ಮಾಡಿದ ವಾದವು ಅತ್ಯುತ್ಕೃಷ್ಟವಾದುದು. ನಿನ್ನಂತಹ ಪಾಪಿಯು ಮನಸ್ಸನ್ನು ಅದು ಎಳೆದು ಕೊಂಡಿದೆ. ಅವನು ಈ ವಾದವನ್ನು ಮಾಡಿಲ್ಲೆಂದು ಏತರಿಂದ ಸಾಧಿಸುತ್ತೀ? ಬಸವನಿಗೆ ಉಪನಯನವಾಗಿತ್ತೆಂದು ನಿನ್ನ ಅಂಬೋಣವಿಲ್ಲ. ಬಸವನು ಉಪನಯನದ ವಿಷಯವಾಗಿ ವಾದವನ್ನು ಮಾಡಿ ಪಂಡಿತರನ್ನು ಸೋಲಿಸದಿದ್ದರೆ ಆತನ ಉಪನಯನವಾಗದೆ ಉಳಿಯುತ್ತಿರಲಿಲ್ಲ. ಆದುದರಿಂದ ಬಸವನು ಪಂಡಿತರನ್ನು ವಾದದಲ್ಲಿ ಸೋಲಿಸಿರಲಿಕ್ಕೆಯೆ ಬೇಕು. ಎಂಟನೆಯ ವರ್ಷವು ಉಪನಯನಕ್ಕೆ ತಕ್ಕ ವಯಸ್ಸು. ಗರ್ಭಾಷ್ಟಮೇಬ್ದೇ ಕುರ್ವೀತ ಬ್ರಾಹ್ಮಣಸ್ಯೋಪನಾಯನಮ್ ॥ ಮನು ॥ ಬಸವೇಶನ ವಿಷಯದಲ್ಲಿ ನಿನ್ನ ಪಾಪಬುದ್ಧಿಯಲ್ಲಿರುವ ದ್ವೇಷ ಸೂಯಾ ದೋಷದಿಂದಲೆ ನೀನು ಒಡಂಬಡಲೊಲ್ಲೆ. ಪಾಪಾತ್ಮರೆ ಜನರು ಅಜ್ಞಾನದಿಂದ ಬಸವನ ತತ್ವಗಳನ್ನು ಮನ್ನಿಸದಿದ್ದರೆ ಅದು ಬಸವೇಶನ ಅಪರಾಧವೊ? ನಿನ್ನ ವಾದ ಸರಣಿಯನ್ನು ಶೈವ ಮತಕ್ಕೆ ಹಚ್ಚಿ ನೋಡು. ಶೈವ ಮತವು ನಿಜವಾಗಿದ್ದರೆ ಭೂಮಂಡಲದಲ್ಲೆಲ್ಲರು ಅದನ್ನೊಪ್ಪುತ್ತಿದ್ದರು. ಆದರೆ ಹಿಂದುಸ್ತಾನದಲ್ಲಿಯೆ ಶೈವರು ಉಳಿದ ಮತದವರಿಗಿಂತ ಒಟ್ಟಿನಲ್ಲಿ ಕಡಿಮೆಯಾಗಿರುವರು. ಭೂಮಂಡಲವನ್ನೆಲ್ಲ ಹಿಡಿದರಂತು ಶೈವ ಮತವು ಬಹಳ ಅಲ್ಪ ಸಂಖ್ಯಾಕವಾಗುವುದು. ಅದರಿಂದ ಶೈವ ಮತವು ಸತ್ಯವಾದುದಲ್ಲ ಎಂದು ನಿನ್ನ ಸರಣಿಯಿಂದ ವಾದ ಮಾಡುವುದು ವಿಹಿತವಾಗುವುದೊ? ನೀನು ಪಂಚಾಚಾರ್ಯರ ವಾದವನ್ನು ಎಬ್ಬಿಸುತ್ತಿಯಲ್ಲ? ಶ್ರೀಪಂಚಾಚಾರ್ಯರ ಪ್ರಸಿದ್ಧಿಯು ಬಸವೇಶ್ವರನಿಗಿಂತ ಹೆಚ್ಚಿಲ್ಲ ಕಡಿಯೂ ಪರಧರ್ಮದ ಸಾವಿರ ಮಂದಿಗೆ ಶ್ರೀಬಸವೇಶ್ವರನ ಹೆಸರು ಗೊತ್ತಿದ್ದರೆ ಆ ಸಾವಿರದಲ್ಲೊಬ್ಬನು ಪಂಚಾಚಾರ್ಯರ ಹೆಸರನ್ನರಿತವನಿರುವನು. ಪರಧರ್ಮದವರು ಬರೆದ ಗ್ರಂಥಗಳಲ್ಲಿ ಶ್ರೀಬಸವನು ಈ ಮತದ ಸ್ಥಾಪಕನೆಂದು ಎಷ್ಟು ಜನರು ಬರೆದಿರುವರು? ಶ್ರೀಪಂಚಾ

ಚಾರ್ಯರು ಸ್ಥಾಪಕರೆಂದು ಎಷ್ಟು ಜನರು ಬರೆದಿರುವರು? ಇದಲ್ಲದೆ ಪ್ರಸಿದ್ಧಿ ಶಬ್ದಾರ್ಥವೇನು ? ಬಹಳ ಜನ ಪಂಡಿತಾ ಪಂಡಿತರಿಗೆ ಹೆಸರು ಗೊತ್ತಿರುವುದೋ ಅಥವಾ ಹೆಸರು ಗೊತ್ತಿದ್ದ ಮಾರ್ಮಿಕ ಪಂಡಿತರಲ್ಲಿ ಯೋಗ್ಯತೆಯು ಹೆಚ್ಚಿನದೆಂದು ಒಡಂಬಡುವುದೊ? ಈ ಎರಡನೆಯ ರೀತಿಯಿಂದ ವಿಚಾರಿಸಿದರೆ ಶಂಕರಾಚಾರ್ಯರಿಗಿಂತ ಬಸವೇಶನ ಕೀರ್ತಿಯು ಹೆಚ್ಚಾಗಿರುವುದು. ಮತ್ತೇನೆಂದರೆ ಆಯಾ ಧರ್ಮ ಪ್ರವರ್ತಕರ ಹೆಸರುಗಳು ಮುಂದೆ ಬರಬೇಕಾದರೆ ತತ್ತತ್ಕಾಲದಲ್ಲಿ ಆ ಮತದವರು ವಿದ್ಯಾವಂತರಾಗಿ ಲೋಕದಲ್ಲಿ ಮತಗಳನ್ನು ತಿಳಿಸಿ ಹರಡಿಸುವ ಶಕ್ತಿಯುಳ್ಳವರಾಗಿರಬೇಕು. ನಮ್ಮಲ್ಲಿ ಮಠದ ಅಧಿಪತಿಗಳೆನ್ನುವವರಾಗಲಿ ಇತರರಾಗಲಿ ವಿಶೇಷ ವಿದ್ಯಾವಂತರಾಗಿಲ್ಲದರಿಂದ ಪರಕೀಯರ ಮುಂದೆ ಈ ಧರ್ಮ ತತ್ವಗಳು ಪ್ರಕಟವಾಗಿಲ್ಲ. ಶ್ರೀಬಸವೇಶನ ತತ್ವಗಳು ಪ್ರಕಟವಾಗಿರುವದರ ಮುಟ್ಟಿಗೆ ಆ ಮಹಿಮನ ವಿಷಯಕ್ಕೆ ನಿಷ್ಪಕ್ಷಪಾತಿಗಳಾದ ಪರಮತೀಯರ ಅಭಿಪ್ರಾಯಗಳನ್ನು ಇದರ ಅನುಬಂಧದಲ್ಲಿ ಜೋಡಿಸಿರುವೆನು. ಅವುಗಳಿಂದ ನಮ್ಮ ಬಸವ ಪ್ರಭುವಿನ ಯೋಗ್ಯತೆಯು ಗೊತ್ತಾವುದು.

ಶ್ರೀ ಬಸವೇಶನು ಪಂಡಿತರೊಡನೆ ತಾನು ವರ್ಣಬ್ರಾಹ್ಮಣ್ಯವನ್ನು ವಿಧಿರಿದವನೆಂತಲೂ, ಅಪ್ರಾಕೃತನೆಂತಲೂ, ವಾದಿಸಿದನು. ಹೊನ್ನು ಹೆಂಣು ಮಂಣ್ಣೆಂಬ ಕರ್ಮದ ಬಟ್ಟೆ. ಇವುಗಲ್ಲಿ ಸಿಲುಕಿ ವೃಥಾ ಬಿರುದೊರೆ ಹೋಹ ಕೆಡಕ ಹಾರುವನಾನಲ್ಲ. ಹಾರುವೆನಯ್ಯ ಶರಣರ ಚರಣವ ಕೂಡಲ ಸಂಗಮದೇವನು ವಿಪ್ರಕರ್ಮವ ಬಿಡಿಸಿ ಅಶುದ್ಧನ ಶುದ್ಧನ ಮಾಡಿದನಾಗಿ. ಮಾ. ೧೮೯. "ದೇವ! ದೇವ! ವಿಪ್ರಮೊದಲು ಅಂತ್ಯಜ ಕಡೆಯಾಗಿ ಶಿವಭಕ್ತರಾದವರನೆಲ್ಲರನೊಂದೆ ಎಂಬೆ ಹಾರುವ ಮೊದಲು ಶ್ವಪಚರ ಕಡೆಯಾಗಿ ಭವಿಯಾದವರನೆಲ್ಲರನೊಂದೆ ಎಂಬೆ ಹೀಗೆಂದು ನಂಬುವುದೆನ್ನ ಮನವು. ಈ ನುಡಿದ ನುಡಿಯೊಳಗೆ ಎಳ್ಳ ಮೊನೆಯಷ್ಟು ಸಂದೇಹವುಳ್ಳರೆ ಹಲ್ಲುದೋರಿ ಮೂಗಕೊಯ್ಯ ಸಂಗಮದೇವ" ಮಾ. ೧೮೪. ಈ ವಾದವು ಶ್ರೀಶಿವಾಗಮಗಳಿಗೂ ವೇದೋಪನಿಷತ್ತುಗಳಿಗೂ

ಅತಿ ಸಮ್ಮತವಾದುದು. ಈ ವಿಷಯದಲ್ಲಿ ಮೇಲೆ ಅನೇಕ ಪ್ರಮಾಣಗಳನ್ನುದಾಹರಿಸಿರುವೆನು. ಇನ್ನೊಂದು ಪ್ರಮಾಣವನ್ನಿಲ್ಲಿ ಹಿಡುವೆನು:- "ತಪಃಪ್ರಭಾವಾದ್ದೇವ ಪ್ರಸಾದಾಚ್ಚ ಬ್ರಹ್ಮಹಶ್ವೇತಾಶ್ವತರೋಽಥ ವಿದ್ವಾನ್ । ಅತ್ಯಾಶ್ರಮಿಭ್ಯಃ ಪರಮಂಪವಿತ್ರಂ ಪ್ರೋವಾಚಸಮ್ಯಗೃಷಿಸಂಘಜುಷ್ಟಂ" ॥ ಶ್ವೇ- ೬ ।೨೧। ತಪಃಪ್ರಭಾವದಿಂದಲೂ ಶಿವಪ್ರಸಾದದಿಂದಲೂ ಶ್ವೇತಾಶ್ವತರನು ಬ್ರಹ್ಮವನರಿತನು. ಅತಿ ಪವಿತ್ರವಾದ ಹಾಗು ಋಷಿಗಳ ಸಮುದಾಯದಿಂದ ಸೇವಿಸಲ್ಪಟ್ಟ ಆ ಬ್ರಹ್ಮವನಾತನು ಅತ್ಯಾಶ್ರಮಿಗಳಿಗೆ ಬೋಧಿಸಿದನು. ಎಂಬೀ ಪ್ರಮಾಣದಿಂದ ಅತ್ಯಾಶ್ರಮಿಯು ಶಿವಜ್ಞಾನಕ್ಕೆ ಮುಖ್ಯಾಧಿಕಾರಿಯು. ಇದೆಯರ್ಥದಲ್ಲಿ ಕೈವಲ್ಯ ಶ್ರುತಿಯ್ಯಾದರುಂಟು:—ಅತ್ಯಾಶ್ರಮಸ್ಥಃ ಸಕಲೇಂದ್ರಿಯಾಣಿ ನಿರುಧ್ಯಭಕ್ತ್ಯಾಸ್ವಗುರುಂ ಪ್ರಣಮ್ಯ । ಹೃತ್ಪುಂಡರೀಕಂ ವಿರಜಂ ವಿಶುದ್ಧಂ ವಿಚಿಂತ್ಯಮಧ್ಯೇ ವಿಶದಂ ವಿಶೋಕಂ। ಕೈ. ೧—೫. ಅತ್ಯಾಶ್ರಮಿಯು ಸಕಲೇಂದ್ರಿಯಗಳನ್ನು ನಿರೋಧಿಸಿ ಭಕ್ತಿಯಿಂದ ಸ್ವಗುರುವನ್ನು ನಮಸ್ಕರಿಸಿ, ಪಾಪರಹಿತವಾದ ಶುದ್ಧವಾದ ಹೃತ್ಕಮಲವನ್ನು ನೆನಿಸಿ ಅದರ ಮಧ್ಯದಲ್ಲಿ ಶುಭ್ರನಾದ, ಶೋಕಗಳು ಸೋಂಕದ, ಪಾರ್ವತೀ ಸಮೇತನಾದ ಪರಮಾತ್ಮನನ್ನು ಮೌನದಿಂದ ಧ್ಯಾನಿಸಿ, ಅನಿರ್ವಾಚ್ಯತೀತವಾದ ಶಿವಸಾಯುಜ್ಯವನೈದುವನು. ಈ ಅತ್ಯಾಶ್ರಮಿಯು ವೀರಶೈವನಲ್ಲದೆ ಬೇರೆಯಲ್ಲ. " ಅತ್ಯಾದಯಃಶಾಂತ್ಯಾದ್ಯರ್ಥೇ" ಎಂಬ ಸೂತ್ರದಿಂದ ವರ್ಣಾಶ್ರಮಾನತಿಕ್ರಾಂತಃ ಅತಿವರ್ಣಾಶ್ರಮಃ ಎಂಬುದು ವೀರಶೈವನಿಗೆ ಸಂಗತವಾಗುತ್ತದೆ. " ಶಿವಸಂಸ್ಕಾರಸಂಪನ್ನೋಽಪ್ಯಯಂ ಶೂದ್ರೋಽಪ್ಯಯಂದ್ವಿಜಃ । ಲಿಂಗಭೇದಃ ಕೃತೋಯೇನ ರೌರವಂ ನರಕಂ ವ್ರಜೇತ್" ಎಂಬ ಪ್ರಮಾಣದಿಂದ ಶಿವದೀಕ್ಷಿತನಾಗಿ ಲಿಂಗಧಾರಿಯಾದವನಲ್ಲಿ ಈತನು ಬ್ರಾಹ್ಮಣನು, ಈತನು ಶೂದ್ರನು ಎಂಬೀ ಭೇದವಿಲ್ಲದರಿಂದರಿಂಪ ಲಿಂಗಾಯತನು ವರ್ಣಗಳನ್ನತಿಕ್ರಮಿಸಿದಾತನೆಂದಾಗುತ್ತದೆ. " ವಂಶಾವಲೀ ಪ್ರಯಾತಾನಾಂ ಲಿಂಗಧಾರಣಶಾಲಿನಾಂ ಜ್ಞಾನಿನಾಂ ಶಿವಭಕ್ತಾನಾಂ ಶೂದ್ರತ್ವಂ ನೈವ ವಿದ್ಯತೇ॥" ಎಂಬೀ ಗಾರುಡವಾಕ್ಯವು. ಲಿಂಗಧಾರಣದಿಂದ ತಮ್ಮ ಪೂರ್ವದ

ಶಾವಳಿಯಿಂದ ಪ್ರಾಕೃತನು ಹೊರಬೀಳುತ್ತಾನೆಂತಲೂ, ಅರ್ಥಾತ್ ಗು ರುಕರಜಾತನಾಗುವನೆಂತಲೂ, ಹಾಗುದದರಿಂದ ಶೂದ್ರನು ಶೂದ್ರನಲ್ಲ ವಾಗುವನೆಂತಲೂ ಸಿದ್ಧಪಡಿಸುತ್ತದೆ. ಆದುದರಿಂದ ಶಿವದೀಕ್ಷಿತನು ಅತಿವರ್ಣನೂ ಅದರಂತೆಯೆ ಈತನು ಚಾತುರಾಶ್ರಮ್ಯವನ್ನು ಮೀರಿ ಷ ಟ್ಸ್ಥಲಾಶ್ರಮಗಳನ್ನು ಹೊಂದುವುದರಿಂದ ಅತ್ಯಾಶ್ರಮಿಯು. ತಸ್ಮಾ ದ್ವೀರಶೈವ ಲಿಂಗಾಂಗಿಯು ಅತಿವರ್ಣಾಶ್ರಮಿಯು. ಆಗಮವು ಕಂಠೋ ಕ್ತಿಯಿಂದಲೆ ಈ ಅರ್ಥವನ್ನು ಹೇಳಿರುತ್ತದೆ. ಉಪಪತ್ತಿಪೂರ್ವಕವಾ ಗಿ ನಾನೀಗ ತೋರಿಸಿದೆನು. "ಲಿಂಗಂಶಿವೋಭವೇತ್ ಕ್ಷೇತ್ರ। ಮಂಗಃ ಸಂಯೋಗಆಶ್ರಯಃ । ತಸ್ಮಾಲ್ಲಿಂಗಾಂಗ ಸಂಯುಕ್ತೋ।ಯೋ ಪಿ ಸೋತ್ಯಾಶ್ರಮೀಭವೇತ್ ॥" ಶಿವನೆ ಲಿಂಗವು. ಅಂಗವೆ ಆ ಶಿವ ಲಿಂಗಕ್ಕೆ ಕ್ಷೇತ್ರವು, ಆದುದರಿಂದ ಲಿಂಗಾಂಗ ಸಂಯುಕ್ತನಾವನೋ ಅ ವನು ಅತ್ಯಾಶ್ರಮಿಯೆ. ಇಲ್ಲಿ ಅತಿ ಎಂಬ ಅವಯವಕ್ಕೆ ಕ್ರಾಂತ ಅಂದರೆ ದಾಟಿದ, ಅಥವಾ ಮೀರಿದ ಎಂಬರ್ಥವನ್ನು ಹೇಳಿದೆನು. ಮೀ ರಿದ ಎಂಬುದರಿಂದಲೆ ಶುದ್ಧನೆಂತಾಗುತ್ತದೆ. ಹೇಗೆಂದರೆ ವರ್ಣಾಶ್ರಮ ಗಳು ಅವಿದ್ಯಾಕಾರ್ಯವಾಗಿ ಆ ಭಾಸಮಾತ್ರವಾಗಿದೆ. ಆ ಭಾಸವನ್ನು ಮೀರಿ ಉಳಿದುದೆ ಶುದ್ಧವು. ವರ್ಣಾಶ್ರಮ ಧರ್ಮವು ಆ ಭಾಸವನ್ನು ವಲ್ಲಿ ಶಿವರಹಸ್ಯವು:—ಕಿಂಕಾಯಕ್ಲೇಶನಿಚಯೈರ್ಧರ್ಮಾಭಾಸನಿಭೈಃ ಶಿವೇ। ಅರ್ಥವ್ಯಯಾಯಾಸಲಭ್ಯೈಃಪತನಾಂತೈರ್ದುರಾಸದೈಃ॥ಯೋ ಗೈರ್ಯಾಗೈಸ್ತೀರ್ಥಯಾತ್ರಾವ್ರತಕೃಚ್ಛ್ರಾದಿಸಾಧನೈಃ । ಇಷ್ಟಾ ಪೂರ್ತೈರನೇಕಪ್ರಭೇದೈರ್ವರ್ಣಾಶ್ರಮನಿಬಂಧನೈಃ ॥ ಶ್ರಮೈಕಭಾರಂ ನೋಸೌಖ್ಯಂ । ಚಿತ್ತಶುದ್ಧಿರ್ನಚೈವಹಿ । ಅತಿಕಲ್ಮಷಚಿತ್ತಾನಾಂ ಸಂ ಸಾರಾಸಾರವರ್ತಿನಾಂ।ಜಡಾನಾಮಲ್ಪಸಾರಾಣಾಂ ಕ್ರಮಾನ್ಮುಕ್ತಿಪ್ರದಾ ಹಿತೇ । ತಸ್ಮಾತ್ತ್ವಯಾ ನಸಂಸೇವ್ಯೋದಾರುಣೋ ಯಮವಗ್ರಹಃ॥ ಸಾಕ್ಷಾನ್ಮುಕ್ತಿಪ್ರದೋಧರ್ಮಃ ಶಿವಲಿಂಗಾರ್ಚನಂ ಶಿವೇ । ತಸ್ಮಿನ್ ಸಂಪೂಜಿತೇ ಶಂಭುರ್ನಿತರಾಂ ಪರಿತುಷ್ಯತಿ । ಅಧಿಕಾರಿವಿಭೇದೇನ ಧ ರ್ಮಾಭಾಸಾಃಶಿವೇನಹಿ । ಕಲ್ಪಿತಾಃ ಶ್ರೀಮಹೇಶೇನ ಶ್ರೌತಸ್ಮಾರ್ತ ಪುರಾಣಕಾಃ॥ ... ಶಿವ

ಲಿಂಗಾರ್ಚನವೇ ಮುಖ್ಯಧರ್ಮವು ವರ್ಣಾಶ್ರಮಾದಿ ಧರ್ಮಗಳು ಲಿಂಗಾರ್ಚನಾಧಿಕಾರವಿಲ್ಲದವರಿಗೆ, ಆ ಅಧಿಕಾರ ಸಂಪಾದನಕ್ಕಾಗಿ ಆಚರಿಸತಕ್ಕ ಧರ್ಮಗಳು. ತನ್ಮುಕ್ತತ್ವಕ್ಕೆ ಅವುಗಳು ಧರ್ಮಾಭಾಸಗಳಲ್ಲದೆ ನಿಜವಾದ ಧರ್ಮವಲ್ಲ. ಇದರಂತೆಯೆ ಶಂಕರಾಚಾರ್ಯರ ಮತವಾದರೂ ವರ್ಣ ಧರ್ಮಗಳು ಆ ಭಾಸವೆಂದುಂಟು. ನೋಡು "ತಥಾಹಿ ಬ್ರಾಹ್ಮಣೋಯಜೇತೇತ್ಯಾದಿ ಶಾಸ್ತ್ರಾಣ್ಯಾತ್ಮನಿ ವರ್ಣಾಶ್ರಮವಯೋವಸ್ಥಾದಿವಿಶೇಷಾಧ್ಯಾಸಮಾಶ್ರಿತ್ಯಪ್ರವರ್ತಂತೇ ಅಧ್ಯಾಸೋನಾಮಾತಸ್ಮಿಂಸ್ತದ್ಬುದ್ಧಿರಿತ್ಯವೋಚಾಮ" ॥ ಬ್ರಾಹ್ಮಣನು ಯಜಿಸಬೇಕು ಎಂಬ ಮೊದಲಾದ ಶಾಸ್ತ್ರಗಳು ಆತ್ಮನಲ್ಲಿ ಒಂದು ಓರಿಗೆಯನ್ನೂ, ವರ್ಣಾಶ್ರಮಾದಿಗಳನ್ನು ಆರೋಪಿಸಿ ನಡೆಯುತ್ತವೆ. ಅಧ್ಯಾಸವೆಂದರೆ ಒಂದು ವಸ್ತುವಲ್ಲದತಲ್ಲಿ ಆ ವಸ್ತುವಿನ ಬುದ್ಧಿಯನ್ನು ಮಾಡೋಣವೆಂದು ಹೇಳಿರುವೆವು. ಆದುದರಿಂದ ಈ ಆ ಭಾಸವಾದ ವರ್ಣಧರ್ಮಗಳನ್ನು ಮೀರಿರುವುದೆ ಶುದ್ಧ ಧರ್ಮವು. ಅಧ್ಯಾಸವು ಪ್ರಕೃತಿಯ ಗುಣವೆಂದು ಶ್ರೀಪಾರಮೇಶ್ವರಾಗಮವು ಹೇಳುತ್ತದೆ. "ಪುರುಷೇಶ್ವರಯೋರತ್ರನವೈಲಕ್ಷಣ್ಯಮಣ್ವಪಿ। ತದನ್ಯಕಲ್ಪನಾಜ್ಞಾನಮಜ್ಞಾನಂ ಪ್ರಕೃತೇರ್ಗುಣಃ ॥" ೨೧-೭೬ ॥ ಶಿವಜೀವರಿಗೆ ಭೇದವೆಷ್ಟು ಇಲ್ಲ. ಅವರು ಭಿನ್ನವೆಂಬುದು ಅಜ್ಞಾನವು-ಅಜ್ಞಾನವು ಪ್ರಕೃತಿಯ ಗುಣವು.-ಅಧ್ಯಾಸವೆಂದರೂ ಪ್ರಾಕೃತವೆಂದರೂ ಒಂದೇಯರ್ಥವು. ಬಸವನು ತಾನು ಸಂಗಮನಾಥನಿಂದ ಶುದ್ಧನಾದವನೆಂದು ಹೇಳುವನು. ಅಂದರೆ ಅಪ್ರಾಕೃತನೆಂದು ಅಥವಾ ಆ ಭಾಸಿಕ ಧರ್ಮವನ್ನು ಮೀರಿದವನೆಂಬರ್ಥ. ಶುದ್ಧನೆಂದರು ಅತಿವರ್ಣಾಶ್ರಮಿ ಎಂಬುದೆ ತಾತ್ಪರ್ಯವು. "ಅತಿಸುಪೂಜನೇ" ಎಂಬ ಸೂತ್ರದಿಂದ ಪೂಜಿತವರ್ಣವೆಂದರೆ ಮೇಲೆಹೇಳಿದ ರೀತಿಯಲ್ಲಿ ಅಪ್ರಾಕೃತವರ್ಣ ಎಂಬ ಅಭಿಪ್ರಾಯವು.

ಬಸವನು ತಾನು ಅತಿ ವರ್ಣಾಶ್ರಮಿ ಅಂದರೆ ಸಹಜ ಬ್ರಾಹ್ಮಣನೆಂದು ಮೇಲುದಾಹರಿಸಿದ ವಚನದಿಂದ ಸಾರುವುದರಿಂದ ಆ ಭಾಸ ಬ್ರಾಹ್ಮಣನಾದ ಮಾದರಸನಿಗಿಂತ ಅಧಿಕವಾಗಿ ವೈದಿಕನೆಂದು ಸಿದ್ಧಪಡಿಸಿರುವನು. ಈ ಸಹಜ ಬ್ರಾಹ್ಮಣ್ಯಕ್ಕೆ ತೈತ್ತಿರೀಯ ಶ್ರುತಿಯದಾದರು

ಆಧಾರವಿಡೆ. "ಸ ಯೋಹ ಬ್ರಹ್ಮವೇದ ಬ್ರಹ್ಮೈವ ಭವತಿ" ತೈತ್ತಿರೀಯ—ಆವಾತನು ಬ್ರಹ್ಮವ ತಿಳಿದನೊ ಅವನು ಬ್ರಹ್ಮನೆಯಾಗುತ್ತಾನೆ. ಈ ಶ್ರುತಿಯಿಂದ ಬ್ರಹ್ಮವ ತಿಳಿದವನು ಬ್ರಹ್ಮವಾಗಲಿ ಬ್ರಾಹ್ಮಣನೆಂತು ? ಕೇಳು. ಬ್ರಹ್ಮವಾದ ರುದ್ರನು "ತ್ವಂದೇವೇಷು ಬ್ರಾಹ್ಮಣಃ" ಎಂಬ ಪ್ರಪದ ಶ್ರುತಿಯಲ್ಲಿಯೂ, "ಬ್ರಾಹ್ಮಣೋ ಭಗವಾನ್ ರುದ್ರಃ ಕ್ಷತ್ರಿಯಃ ಪರಮೋ ಹರಿಃ ॥ ಎಂಬ ಮುಂತಾದ ಪೌರಾಣಿಕ ವಾಕ್ಯಗಳಲ್ಲಿಯೂ ಬ್ರಾಹ್ಮಣನೆಹಗೊ ಅಂತೆಯೆ ಬ್ರಹ್ಮವ ತಿಳಿದು ಬ್ರಹ್ಮವಾದ ಬಸವನು ಸಹಜ ಬ್ರಾಹ್ಮಣನು—

ಬ್ರಹ್ಮವನರಿತವನು ಬ್ರಾಹ್ಮಣನಾಗಲಿ, ಆದರೆ ಬ್ರಹ್ಮಾನುಭವವು ದೃಢವಾಗುವತನಕ ಪ್ರಾಕೃತ ವರ್ಣಗಳು ಇರಲಿಯೆಂದರೆ ಆದಾಗದು. ಲಿಂಗಧಾರಣದಿಂದ ಮುಮುಕ್ಷುವಿನ ಸ್ಥೂಲ ಶರೀರವು ತನ್ನ ಪೂರ್ವದ ಸಾಮಾನ್ಯವನ್ನು ಮೀರಿ ಲಿಂಗಕ್ಕಾಶ್ರಯವಾದ ಕ್ಷೇತ್ರವೆನಿಸಿತು. ಹಾಗು ಗುರುವು ಲಿಂಗಧಾರಣಂಗೆಯ್ಯುವಲ್ಲಿಯೆ ಹಸ್ತಮಸ್ತಕ ಸಂಯೋಗಂಗೆಯ್ದು ಶಿವಮಂತ್ರೋಪದೇಶ ಪೂರ್ವಕವಾಗಿ ಶಿಷ್ಯನ ಶಿವತ್ವವನ್ನು ಬೋಧಿಸಿದರಿಂದ ಭ್ರಮರ ಕೀಟದಂತೆ ತದಾತ್ಮ್ಯನಪರನಾದ ಶಿಷ್ಯನಿಗೆ ದೇಹಾತ್ಮಭಾವವನ್ನು ಹೇಳಬಾರದು. ದೇಹಾತ್ಮಭಾವವಿಲ್ಲದರಿಂದ ಅಲ್ಲಲ್ಲ ಅದಕ್ಕೂ ಹೆಚ್ಚಿಗೆ ದೇಹವೇ ದೇಹತ್ವವನಳಿದು ಲಿಂಗಕ್ಷೇತ್ರವಾಗಿರುವುದರಿಂದ, ದೇಹಾತ್ಮಭ್ರಮದಿಂದಾದ ಜಾತ್ಯಾದಿಯು ಸಾಧಕನಾದ ಲಿಂಗಾಯತನಿಗೂ ಇಲ್ಲವು. ಜ್ಞಾನಸಾಕ್ಷಾತ್ಕಾರದ ಪೂರ್ವದಲ್ಲಿ ಜಾತ್ಯಾದಿಗಳು ಉಳಿಯಲಿಕ್ಕೆ ಮಾರ್ಗವೆ ಇಲ್ಲ. ಸಾಧಕನು ಆತ್ಮನಾತ್ಮವಿಚಾರಪರನಾಗಿರುವನಷ್ಟೆ ಈ ವಿಚಾರಕ್ಕೆ ದೇಹವಾನಲ್ಲೆಂಬ ಬುದ್ಧಿಯೇ ಮೊದಲನೆಯ ಮೆಟ್ಟು. ಆದುದರಿಂದ ಸ್ಥೂಲದೇಹದಿಂದಾದ ಜಾತಿಯು ದೀಕ್ಷೆಯಾದೊಡನೆಯೆ ನಿಲ್ಲಲಾರದು. ಮತ್ತೊಂದು ಬಗೆಯಿಂದಲೂ ಶಿವದೀಕ್ಷೆಯಾದೊಡನೆಯೆ ನಿಲ್ಲಲಾರದು. ಮತ್ತೊಂದು ಬಗೆಯಿಂದಲೂ ಶಿವದೀಕ್ಷಿತನಾದ ಮುಮುಕ್ಷು ವೀರಶೈವನು ಪ್ರಾಕೃತವರ್ಣವ ಮೀರಿದವನೆಂದು ತೋರಿಸುವೆನು. "ಸಯೋಹವೈ ಬ್ರಹ್ಮವೇದ ಬ್ರಹ್ಮೈವ ಭವತಿ" ಎಂಬ ಶ್ರುತಿಯಿಂದ ಬ್ರಹ್ಮನಿಷ್ಠನಾದ ಗುರುವು ಬ್ರಹ್ಮವು. ಆ ಗುರುವಿನ ಕರಜಾತನು. "ತ್ವಮೇವನಃ ಪಿತಾಯೋಸ್ಮಾಕಮ ವಿದ್ಯಾ

ಯಾಃ ಪರಂ ಪಾರಂ ತಾರಯಸಿ " ಎಂಬ ಮುಂಡಕ ಶ್ರುತಿಯಿಂದ ಆತನ ಮಗನು. ಆದುದರಿಂದ ಬ್ರಹ್ಮನ್ ಶಬ್ದಕ್ಕೆ " ತಸ್ಯಾಪತ್ಯಂ " ಎಂಬ ಸೂತ್ರದಿಂದ ಅಣ್‌ಪ್ರತ್ಯಯವು ಸೇರಿ ಗುರುಕರದೀಕ್ಷಿತನು ಸಹಜ ಬ್ರಾಹ್ಮಣನು ಅತಿ ವರ್ಣಾಶ್ರಮಿಯು.

ಬ್ರಾಹ್ಮಣಾ ವೀರಶೈವಸ್ಥಾಃ ಶಿಖಾಯಜ್ಞೋಪವೀತಿನಃ । ಲಿಂಗ ರುದ್ರಾಕ್ಷಭಸ್ಮಾಂಕಾ ಬ್ರಹ್ಮಕರ್ಮಸಮಾಶ್ರಿತಾಃ ॥ ಪಾರಮೇಶ್ವರ ಸೀತಾಚಾರ್ಯೈಃ ಸಂಧೃತೇಷ್ಟಲಿಂಗಬ್ರಹ್ಮಸಮಾಯುತಃ । ಶಿಖಾಸೂ ತ್ರಜಟಾಭಸ್ಮಶಿವಾಲಾಂಛನಲಾಂಛಿತಃ ॥ಪಾಶುಪತಾಗಮ॥ ಎಂಬೀ ಆಗ ಮ ಪ್ರಮಾಣಗಳಿಂದ ವೀರಶೈವರಿಗೆ ಶಿಖಾಸೂತ್ರಗಳಿರಬೇಕೆಂದು ಸಿದ್ಧ ವಾಗುತ್ತಿರಲು ಇವುಗಳನ್ನು ಬಸವನು ದೂರೀಕರಿಸಿದುದು ಧರ್ಮಚ್ಯು ತಿಯೆಂದು ನಮ್ಮ ಕಾಶೀನಾಥನ ವಾದವು. ಈ ಪ್ರಶ್ನವನ್ನು ಹಾಕುವ ಲ್ಲೀತನ ಜಾಣ್ಮೆಯನ್ನು ನೋಡಿರಿ!

ಈ ವೀರಶೈವ ಪ್ರತಸ್ಥರಾದ ಲಿಂಗಧಾರಿ ಬ್ರಾಹ್ಮಣರು ವೀರಶೈವ ರೆಂದು ಪಾರಮೇಶ್ವರವು ಹೇಳುವುದಿಲ್ಲ. ಶುದ್ಧಶೈವರೆಂದು ಹೇಳುತ್ತದೆ. ಇಲ್ಲದಿದ್ದರೆ ಪರಮೇಶ್ವರನ ವಾಕ್ಯಗಳಲ್ಲಿ ಪರಸ್ಪರ ಮೇಳವಿಲ್ಲದೆ ಆಗಮ ಗಳು ಧರ್ಮಬೋಧಕ ಪ್ರಮಾಣವಾಗಲಾರವು. ನೋಡು ಪಾರಮೇಶ್ವ ರಾಗಮದ ಪಂಚಮಪಟಲದಲ್ಲಿ ವೀರಶೈವರಾದ ಬಳಿಕ ಜಾತಿಭೇದವನ್ನು ಮಾಡಕೂಡದೆಂದು " ಯೇ ಸಂತಿ ಜಾತಿಭೇದಾಸ್ತು ನೇಕವಚ್ಛಿವಯೋ ಗಿನಃ ಪಶ್ಯೇಯುರಖಿಲಜಾತಿಸ್ಥಾನೇ ಕಮಾತೃಸಹೋದರಾನ್ ॥ ನಸ್ತ್ರೀ ಭೇದೋನಪುಂಭೇದೋ ಜಾತಿವರ್ಣಾಶ್ರಮಾದಿಕಂ । ಸರ್ವಾತೀತಮಿದಂ ವಿದ್ಧಿ ವೀರಶೈವಮತಂ ಮಮ ॥ " ಲೋಕದಲ್ಲಿರುವ ಜಾತಿಭೇಧಗಳನ್ನು ಒಂದೆ ಸಮಭಾವದಿಂದ ಒಬ್ಬಾಕೆಯ ತಾಯಿಯ ಒಡಲಿಂದ ಹುಟ್ಟಿದ ಅ ಣ್ಣತಮ್ಮಂದಿರಂತೆ ಕಾಣಬೇಕು. ಈ ನನ್ನ ವೀರಮತದಲ್ಲಿ ಸ್ತ್ರೀಪುರು ಷ ಭೇದವಿಲ್ಲ. ಅಂದರೆ ಪ್ರಾಕೃತಧರ್ಮದಲ್ಲಿ ಸ್ತ್ರೀಯು ಸ್ವತಂತ್ರ ವಾಗಿ ಧರ್ಮ ಸಂಸ್ಕಾರಗಳನ್ನು ಹೊಂದಲಾರಳು ಆಕೆಗೆ ಉಪನಯನ ಸಂಸ್ಕಾರವಿಲ್ಲ. ಅದರಂತೆ ವೀರಶೈವಮತದಲ್ಲಿಲ್ಲ. ಇಲ್ಲಿ ಸ್ತ್ರೀಯರಾದ ರು ಲಿಂಗಧಾರಣಾದಿ ಸಂಸ್ಕಾರಗಳನ್ನು ಹೊಂದಲಿಕ್ಕೆ ಪುರುಷರಷ್ಟೇ

ಯೋಗ್ಯರು. ಜಾತಿವರ್ಣಾಶ್ರಮ ಭೇದಗಳಿಲ್ಲ. ಪ್ರಾಕೃತರಲ್ಲಿ ಉಪನಯನಾದಿ ಸಂಸ್ಕಾರಗಳು ಬ್ರಹ್ಮಕ್ಷತ್ರಿಯ ವೈಶ್ಯರೆಂಬ ತ್ರಿವರ್ಣಗಳಿಗೆ ಸಮವಾಗಿದ್ದರು ಅವರವರ ಉಪನಯನಾದಿಗಳನ್ನು ಹೊಂದತಕ್ಕ ಕಾಲಗಳಲ್ಲಿಯು, ಧರಿಸತಕ್ಕ ಯಜ್ಞೋಪವೀತ ದಂಡಾದಿಗಳಲ್ಲಿಯೂ ಭೇದವಿದೆ ಹಾಗೆ ವೀರಶೈವದೀಕ್ಷೆಯಲ್ಲಿ ಧರಿಸತಕ್ಕ ಲಿಂಗದಲ್ಲಿಯು ದೀಕ್ಷಾದಿಕಾಲದಲ್ಲಿಯೂ ಜಾತಿ ಜಾತಿಗೆ ಭೇದವಿಲ್ಲ. ಈ ಮತವು ಸರ್ವಭೇದಗಳನ್ನು ನಿವರಿ ಧರ್ಮದ ಏಕರೂಪತೆಯನ್ನುಳ್ಳದು ಎಂಬೀ ಪ್ರಮಾಣದಿಂದ ಪರಮಾತ್ಮನು ಸ್ಪಷ್ಟವಾಗಿಯೆ ಆಜ್ಞಾಪಿಸಿರುವನು. ಇದರಂತೆ ಸೂಕ್ಷ್ಮಾಗಮಾದಿಗಳಾದರು ವೀರಶೈವರಲ್ಲಿ ಜಾತಿ ಭೇದವಿರಲಾರದೆಂದು ಕಂಠೋಕ್ತಿಯಿಂದಲೆ ಹೇಳುತ್ತಿವೆ. ಇಂತಿವೆಲ್ಲ ಪ್ರಮಾಣ ಬಾಹುಲ್ಯಕ್ಕೆ ವಿರುದ್ಧವಾಗಿ ಜಾತಿ ಭೇದವನ್ನು ಪಾರಮೇಶ್ವರಾಗಮದ ಈ ವಾಕ್ಯವು ಹೇಳುವುದಿಲ್ಲ. ಪಾರಮೇಶ್ವರದ ವಿಷಯಾನುಕ್ರಮಣಿಯಿಂದಲೂ ಈ ಅರ್ಥವು ಸ್ಪಷ್ಟವಿದೆ. ಹದಿನಾರನೆಯ ಪಟಲತನಕ ಶುದ್ಧ ವೀರಶೈವ ಧರ್ಮಗಳನ್ನು ತಿಳುಹಿ ೧೭ ನೆಯ ಪಟದಲ್ಲಿ ವೀರಶೈವ ವ್ರತಗಳನ್ನು ಅನುಸರಿಸುವ ಆಯಾ ಜಾತಿಸ್ಥರ ಧರ್ಮಗಳನ್ನು ಪರಮೇಶ್ವರನು ಪಾರ್ವತಿಗೆ ಅರುಹುತ್ತಿರುವನು. ಪಟಲಾರಂಭದಲ್ಲಿ ಶ್ರೀ ಪಾರ್ವತಿಯ ಪ್ರಶ್ನವಿದು. "ವದಲೋಕೋಪಕಾರಾಯ ವೀರಶೈವೇ ವಿಶೇಷಕಮ್" ಪರಮೇಶನೆ ಲೋಕೋಪಕಾರಕ್ಕಾಗಿ ವೀರಶೈವದಲ್ಲಿ ಮತ್ತೇನಾದರು ವಿಶೇಷವಿದ್ದರೆ ತಿಳಿಸು. ಎಂದುದಕ್ಕೆ ಸರ್ವಾತ್ಮನಾ ವೀರಶೈವ ಧರ್ಮವನ್ನು ಅನುಸರಿಸಿ ಚರಿಸುವವರ ಆಚಾರಗಳನ್ನಂತು ಮೊದಲು ಹೇಳಿದೆನು ಇನ್ನು ತಮ್ಮ ತಮ್ಮ ಜಾತಿಗಳಲ್ಲಿ ಪ್ರಾಕೃತರಂತೆ ಉಳಿದು ವೀರಶೈವ ವ್ರತವನ್ನು ನಡಿಸುವವರ ವಿವರವನ್ನು ಕೇಳೆಂದು ಪರಮಾತ್ಮನು ಹೇಳುವನು. "ಬ್ರಾಹ್ಮಣಾವೀರಶೈವಸ್ಥಾಃ ಶಿಖಾಯಜ್ಞೋಪವೀತಿನಃ । ಲಿಂಗರುದ್ರಾಕ್ಷಭಸ್ಮಾಂಕಾಬ್ರಹ್ಮಕರ್ಮಸಮಾಶ್ರಿತಾಃ । ಶಿವಾಚಾರರತಾನಿತ್ಯಂ ಲಿಂಗಪೂಜಾಪರಾಯಣಾಃ ॥ ಶಿವಾರಾಧ್ಯಾಃ ಸದಾದೇವಿಮುನೀನಾತಿಪ್ರಿಯಕಾರಣಾಃ । ಶುದ್ಧಶೈವಾಃ ಸಮಾಖ್ಯಾತಾಃ ಗೃಹಸ್ಥಾ ಗೃಹಿಣೀಯುತಾಃ ॥ ವಿಪ್ರಶೈವಾಮಹಾದೇವಿ ಕ್ಷತ್ರಿ

ಯಾವೈಶ್ಯಶೂದ್ರಜಾಃ । ಸುಶೀಲಾಚಾರಸಂಪನ್ನಾಃ ಶೀಲವಂತಶ್ಚ ಲಿಂಗಿ ನಃ ॥ " ಎಲೌ ದೇವಿಯೆ ಬ್ರಾಹ್ಮಣರು ವೀರಶೈವ ವ್ರತಸ್ಥರಾದವರು ಶಿಖಾಸೂತ್ರಗಳಿನ್ನಿಡುವವರು ಅವರು ಲಿಂಗಭಸ್ಮರುದ್ರಾಕ್ಷಿಗಳೆಂಬ ಶಿವ ಚಿಹ್ನಗಳನ್ನು ಧರಿಸುವವರು. ಬ್ರಹ್ಮಕರ್ಮಗಳನ್ನಾಚರಿಸುವರು ಈ ಶಿ ವಾರಾಧ್ಯರು ಗ್ರಹಸ್ಥಾಶ್ರಮಿಗಳೆಲ್ಲರಲ್ಲಿ ನನಗೆ ಅತಿಪ್ರೀತಿಹೇತು ವಾಗಿರುವರು. ಅವರಿಗೆ ಶುದ್ಧ ಶೈವರೆನ್ನುವರು. ಅದರಂತೆಯೆ ಕ್ಷ ತ್ರಿಯರೂ ವೈಶ್ಯರೂ ಶೂದ್ರರೂ ಲಿಂಗಧಾರಿಗಳಾಗಿ ಸದಾಚಾರಿಗಳಾದ ರೆ ಮಿಶ್ರಶೈವರೆನಿಸುವರು. ಈ ಎಲ್ಲ ಪ್ರಮಾಣ ಸಮುಚ್ಚಯದಿಂದ ತಮ್ಮ ತಮ್ಮ ಜಾತಿಯಲ್ಲಿ ಜುಗುಪ್ಸೆಯುಂಟಾಗಿ ಗುರುವಿನಿಂದ ಲಿಂಗಾಂ ಗಸಾಮರಸ್ಯಕ್ಕಾಗಿ ಲಿಂಗಧಾರಣವನ್ನು ಹೊಂದಿದವರೆ ವೀರಶೈವರು, ಇನ್ನುಳಿದವರು ತಮ್ಮ ತಮ್ಮ ಜಾತಿಗಳಲ್ಲಿದ್ದು ವೀರಶೈವ ವ್ರತವನ್ನು ಮಾತ್ರ ನಡಿಸುವರು ಜಾತಿಯೆಂಬ ಪ್ರಾಕೃತಾಂಶವನ್ನು ಬಿಡದುದರಿಂದ ವೀರಶೈವರಲ್ಲ-ಶುದ್ಧ ಮಿಶ್ರ ಅವಾಂತರ ಎಂಬ ಶೈವರಾಗುವರು. ಆದು ದರಿಂದ ಕಾಶಿನಾಥನ ಶಿಷ್ಯನಾದ ಶಾಂತಪ್ಪನು ಅಥವಾ ಶಾಂತಪ್ಪನ ಮರೆಯಲ್ಲಿಯ ಕಾಶೀನಾಥನು ಉದಾಹರಿಸುವ ಈ ಶ್ಲೋಕವು ವೀರಶೈ ವರಿಗೆ ಸಂಬಂಧಿಸಿದುದಲ್ಲ. ತಸ್ಮಾತ್ ಶ್ರೀಬಸವೇಶನು ಶಿಖಾಯಜ್ಞೋ ಪವೀತಗಳನ್ನು ಧರಿಸದಿರುವುದು ಪಾರಮೇಶ್ವರ ವಾಕ್ಯಕ್ಕೆ ವ್ಯಾಕೋ ಪವನ್ನುಂಟು ಮಾಡುವುದಿಲ್ಲ. ಇನ್ನು ಪಾಶುಪತತಂತ್ರವೊಂದುಳಿದಿತು. ಪಾಶುಪತತಂತ್ರವು ಎಷ್ಟು ಅಧ್ಯಾಯಗಳನ್ನು ಅಥವಾ ಪಟಲಗಳನ್ನು ಳ್ಳದು. ಎಷ್ಟನೆಯ ಪಟಲದಲ್ಲಿ ಈ ಪ್ರಮಾಣವಿದೆ? ಸುಪ್ರಭೇದ ಪ್ರಭಂಜನದಲ್ಲಿ ಪಾಶುಪತ ತಂತ್ರವೆಂಬುದಾಗಮವಲ್ಲೆಂದು ಹೇಳಿದುದ ಕ್ಕೆ ಕಾಶಿನಾಥೀಯ ಪಕ್ಷದ ಉತ್ತರವೇನಿರುವದು? ಪಾಶುಪತಾಗಮದಂ ತೆ ಅನ್ಯವೀರಶೈವರಿಗೆ ಶಿಖಾಯಜ್ಞೋಪವೀತಗಳನ್ನು ಕೊಡುವಅಧಿಕಾ ವುಳ್ಳ ಉಜ್ಜನೀಕಾಶೀಸ್ವಾಮಿಗಳಿವನ್ನು ಧರಿಸಿರುವರೊ?

ಇನ್ನಿೀ ವಾಕ್ಯವು ವೀರಶೈವ ಪ್ರಕರಣಸ ವೆಂದು ಹಿಡಿಯೋಣ ಹಾ ಗಾದರು ಲಿಂಗಾಯತನಾದ ವೀರಶೈವನು ಶಿಖಾಯಜ್ಞೋಪವೀತಗಳ ನ್ನು ತಾಳಬೇಕೆಂದು ವಿಧಿಸುತ್ತದೆಯೋ? "ವಿಧಿರತ್ಯಂತಮಪ್ರಾಪ್ತೇ

ನಿಯಮಃ ಪಾಕ್ಷಿಕೇ ಸತಿ । ತಸ್ಯಚಾನ್ಯ ಸ್ಯಚಪ್ರಪ್ತೌ ಪರಿ ಸಂಖ್ಯೇತಿಗೀಯತೇ ” ॥ ಆವುದೊಂದು ಪ್ರಮಾಣಾಂತರದಿಂದ ಗೊತ್ತಾಗದ ಧರ್ಮಪ್ರಮೇಯವನ್ನು ಆಜ್ಞಾಪಿಸುವುದು (ಅಪೂರ್ವ) ವಿಧಿಯು. ಬೇರೊಂದು ಕಾರಣದಿಂದ ಪ್ರಾಪ್ತವಾದುದನ್ನೇ ಆಲಸ್ಯಾದಿಗಳಿಂದ ತ್ಯಜಿಸತಕ್ಕುದಲ್ಲೆಂದರುಹುವುದು ನಿಯಮ ವಿಧಿಯು. ವಿಧಿಸತಕ್ಕ ವಸ್ತುವು, ನಿಷೇಧಿಸಬೇಕಾದ ವಸ್ತುಗಳೊಡನೆ ಕೂಡಿ ಒದಗಲು. ವಿಧಿಸಬೇಕಾದವುಗಳನ್ನಷ್ಟೆ ಚೋದಿಸುವುದು ಪರಿ ಸಂಖ್ಯಾ ವಿಧಿಯು ಈ ಮೂರು ವಿಧಿಗಳಿಗೆ ಅನುಕ್ರಮವಾಗಿ “ ಅಹರಹಃ ಸಂಧ್ಯಾಮುಪಾಸೀತ ” ದಿನಾಲು ಸಂಧ್ಯೋಪಾಸ್ತಿಯನ್ನು ಮಾಡತಕ್ಕುದು. “ ವ್ರೀಹೀನವಹಂತಿ ” ಪುರೋಡಾಶಕ್ಕಾಗಿ ಅಕ್ಕಿಯನ್ನು ಸಿದ್ಧಪಡಿಸಲು. ಭತ್ತತೊಳಿಸುವನು ಅಥವಾ ತೊಳಿಸಬೇಕು. “ ಪಂಚಪಂಚನಖಾಭಕ್ಷ್ಯಾ ಶಲ್ಲಕಃ ಶಶಕೋಗೋಧಾ ಖಡ್ಗೀಕೂರ್ಮಶ್ಚಪಂಚಮಃ ” ಲಿಂಗಧಾರಣ ಚಂದ್ರಿಕೋದಾಹೃತಗ್ರಂಥ “ಭಕ್ಷ್ಯಾಃಪಂಚನಖಾಃ ಸೇಧಾಗೋಧಾಶಲ್ಲಕ ಕಚ್ಛಪಾಃ । ಶಶಶ್ಚಮತ್ಸ್ಯೇಷ್ವಪಿಹಿ: ಸಿಂಹತುಂಡಕರೋಹಿತಾಃ ” ॥ ಯಾಜ್ಞವಲ್ಕ್ಯ ೧-೧೭೭. ಮೊಲವು, ಶಲ್ಲಕವು, ಉಡು, ಏದು, ಆವೆಯು ಎಂಬಿವೈದನ್ನು ಐದು ಉಗುರುಳ್ಳ ಪ್ರಾಣಿಗಳಲ್ಲಿಯೂ, ಸಿಂಹ, ತುಂಡುಕ ರೋಹಿತವೆಂಬ ಜಾತಿಗಳನ್ನು ಮೀನಗಳಲ್ಲಿಯೂ ತಿನ್ನಬೇಕು. ” ಎಂಬಿವು ಉದಾಹರಣವಾಗಿವೆ. ಮೊದಲನೆಯ ಉದಾಹರಣದಲ್ಲಿ ವಿಧಿಸಲ್ಪಟ್ಟ ಸಂಧ್ಯೋಪಾಸ್ತಿಯು ಈ ಶ್ರುತಿ ವಾಕ್ಯದಿಂದಲ್ಲದೆ ಬೇರಾವ ಲೌಕಿಕ ವೈದಿಕ ಪ್ರಮಾಣಗಳಿಂದ ಸಿದ್ಧವಾಗುವುದಿಲ್ಲ. ಅದರಿಂದೀ ವಾಕ್ಯವು ಅಪೂರ್ವ ವಿಧಿಯು. ಎರಡನೆಯ ಉದಾಹರಣದಲ್ಲಿ ಅವಹನನವು ಅಥವಾ ತೊಳಿಸೋಣವು ವಿಹಿತವಾಗಿದೆ. ಅಕ್ಕಿಯನ್ನು ಮಾಡುವುದಕ್ಕಾಗಿ ಆರಾದರು ಭತ್ತವನ್ನು ತೊಳಿಸುವುದುಂಟು. ಅಥವಾ ತೊಳಲಿಯ ಕಲ್ಲಿನಿಂದಾದರು ಭತ್ತವನ್ನಕ್ಕಿಯನ್ನಾಗಿ ಸಬಹುದು. ಹೀಗೆ ಅನೇಕ ಸಾಧನಗಳು ಲೌಕಿಕಾನುಭವದಿಂದ ಒದಗಿರುತ್ತವೆ. ಆದುದರಿಂದ ಪುರೋಡಾಶಕ್ಕಾಗಿ ಅಕ್ಕಿಯು ಬೇಕಾದವನು ಭತ್ತವನ್ನು ಕಲ್ಲಿನಿಂದೊಡೆದಾಗಲಿ, ಉಗುರಿನಿಂದ ಸುಲಿದಾಗಲಿ ಅಕ್ಕಿಯು ಮಾಡಬಹುದು. ಆದರೆ ಹಾಗೆ ಮಾಡದೆ

ಪುರೋಡಾಶಕ್ಕೆ ಬೇಕಾದ ಅಕ್ಕಿಯನ್ನು ತೊಳಸಿಯೆ ಮಾಡಬೇಕೆಂಬುದು ನಿಯಮ ವಿಧಿಯು. ಮೂರನೆಯುದಾಹರಣದಲ್ಲಿ ಐದುಗುರುಳ್ಳ ಮ ರ್ಕಟಾದಿಗಳು ಸಹ ದ್ವಿಜನಿಂದ ಭಕ್ಷ್ಯವೆಂದು ಪ್ರಾಪ್ತವಾಗಿರಲು ಮೊಲವು ಮುಂತಾದ ಐದು ಉಗುರುಳ್ಳ ಐದು ಪ್ರಾಣಿಗಳನ್ನಷ್ಟೆ ಮೀನಗಳಲ್ಲಿ ಎಲ್ಲ ಜಾತಿಯವು ತಿನ್ನಬಹುದಾಗಿರಲು ಸಿಂಹ ತುಂಡಕ ರೋಹಿತಗಳನ್ನಷ್ಟೆ ತಿನ್ನಬೇಕೆಂದು ಉಳಿದ ಪಂಚನಖಗಳನ್ನೂ ಉಳಿದ ಮೀನಗಳನ್ನೂ ನಿಷೇಧಿಸುವುದು ಪರಿಸಂಖ್ಯಾ ವಿಧಿಯು.

ಈ ಮೂರು ವಿಧಿಗಳೂ ಇಲ್ಲಿ ಸಂಭವಿಸುವುದಿಲ್ಲ. ಮೂಲತಃ ಈ ವಾಕ್ಯದಲ್ಲಿ " ವಿಧಿನಿಮಂತ್ರಣಾ ಮಂತ್ರಣಾಧೀಷ್ಟ ಸಂಭವಿಸಂಪ್ರಶ್ನ ಪ್ರಾರ್ಥನೇಷುಲಿಙ್ " ಎಂಬ ಸೂತ್ರದಿಂದ ವಿಹಿತವಾದ ವಿಧಿವಾಚಕ ಪ್ರತ್ಯಯಯುಕ್ತವಾದ ಕ್ರಿಯಾಪದವಿಲ್ಲ. ಅಂದರೆ ವೀರಶೈವ ಬ್ರಾಹ್ಮಣನು ಶಿಖಾಯಜ್ಞೋಪವೀತಗಳನ್ನು ಧರಿಸಬೇಕು. ಎಂದು ಹೇಳುವ ಬ್ರಾಹ್ಮಣಾವೀರಶೈವಸ್ಥಾಃ ಶಿಖಾಯಜ್ಞೋಪವೀತೇಧರೇಯುಃ ಎಂದು ಪ್ರಯೋಗವಿಲ್ಲ. ಅಥವಾ " ವ್ರೀಹೀನವಹಂತಿ" ಎಂಬ ವಾಕ್ಯದಲ್ಲಿರುವಂತೆ ವರ್ತಮಾನ ಪ್ರಯೋಗವಾದರೂ ಇರುವುದಿಲ್ಲ ಹೀಗಿದ್ದರು "ಶಿಖಾಯಜ್ಞೋಪವೀತಿನಃ" ಎಂಬ ವಿಶೇಷಣಪದಬಲದಿಂದ ಶಿಖಾಯಜ್ಞೋಪವೀತಗಳು ವಿಧಿಸಲ್ಪಡಬಹುದೆಂದರೆ ಆಗಲಾರದು. ಇದು ಅಪೂರ್ವವಿಧಿಯಂತು ಅಲ್ಲ. ವೀರಶೈವಸ್ಥಬ್ರಾಹ್ಮಣನಿಗೆ ಬ್ರಾಹ್ಮಣನಾದುದರಿಂದ ಶಿಖಾಯಜ್ಞೋಪವೀತಗಳು ವಿಧಿಸಲ್ಪಡುತ್ತವೆಯೊ ವೀರಶೈವನಾದುದರಿಂದ ವಿಧಿಸಲ್ಪಡುತ್ತವೆಯೋ? ವೀರಶೈವನಾದುದರಿಂದ ವಿಧಿಸಲ್ಪಡುತ್ತವೆಯೆಂದರೆ ವೀರಶೈವನಲ್ಲದ ಬ್ರಾಹ್ಮಣನಿಗೆ ಶಿಖಾಯಜ್ಞೋಪವೀತಗಳು ಬೇಕಾಗಲಿಲ್ಲ ಇದು ಶಾಸ್ತ್ರಸಮ್ಮತವಲ್ಲ. ಬ್ರಾಹ್ಮಣನಾದುದರಿಂದ ವಿಧಿಸಲ್ಪಡುತ್ತವೆ ಎಂದೆಯಾದರೆ "ಯತ್ರಬಾಣಾಃ ಸಂಪತಂತಿ ಕುಮಾರಾವಿಶಿಖಾಇವ " ಎಂಬ ಮಂತ್ರಲಿಂಗಕ್ಕನುಸರಿಸಿ "ತೃತೀಯೇವರ್ಷೇ ಚೌಲಂಯಥಾಕುಲಧರ್ಮಂವಾ " ಎಂಬ ಆಶ್ವಲಾಯನಸೂತ್ರವೂ "ಚೂಡಾಕರ್ಮದ್ವಿಜಾತೀನಾಂ ಸರ್ವೇಷಾಮೇವಧರ್ಮತಃ । ಪ್ರಥಮೇಬ್ದೇ ತೃತೀಯೇವಾಕರ್ತವ್ಯಂ ಶ್ರುತಿಚೋದನಾತ್ ॥ ಮ. ॥ ಎಂಬ

ಸ್ಮೃತಿಯೂ ಯಜ್ಞೋಪವೀತವನ್ನು ಎಂಟನೆಯ ವರ್ಷದಲ್ಲಿಯೂ ವಿಧಿಸುವುದರಿಂದ ಪ್ರಮಾಣಾಂತರ ಪ್ರಾಪ್ತವಾದ ಶಿಖಾಯಜ್ಞೋಪವೀತಗಳಿಗೆ ಈ ವಿಶೇಷಣವು ಅಪೂರ್ವವಿಧಿಯಾಗಲಾರದು. ನಿಯಮವಿಧಿಯಲ್ಲಿಯೂ ಪರಿಸಂಖ್ಯಾವಿಧಿಯಲ್ಲಿಯೂ ಅನ್ಯನಿಷೇಧ ಫಲಕ ವಿಧಿ ಇದು ಕ್ತ್ರಬೆ. ಹೇಗೆಂದರೆ "ವ್ರೀಹೀನವಹಂತಿ" ಎಂಬ ವಾಕ್ಯದಿಂದ ಪುರೋಡಾಶಕ್ಕೆ ಬೇಕಾದ ಅಕ್ಕಿಯನ್ನು ಭತ್ತವನ್ನು ತೊಳಿಸಿಮಾಡಬೇಕನ್ನುವುದರಿಂದಲೂ, ಪರಿಸಂಖ್ಯಾವಿಧಿಗುದಾಹರಣವಾದ "ಪಂಚ ಪಂಚನಖಾ ಭಕ್ಷ್ಯಾಃ" ಎಂಬ ವಾಕ್ಯದಲ್ಲಿ ಶಶಕಾದಿಗಳನ್ನು ಭಕ್ಷಿಸಬಹುದೆಂದು ಹೇಳುವುದರಿಂದಲೂ, ತೊಳಲಿಯಕಲ್ಲೂ, ಮರ್ಕಟಾದಿಗಳೂ ನಿಷಿದ್ಧವಾಗುವಂತೆ ಶಿಖಾಯಜ್ಞೋಪವೀತಗಳಿಂದ ನಿಷಿದ್ಧವಾಗುವ ಪದಾರ್ಥಗಳಾವೂ ತೋರದದರಿಂದ ಇಲ್ಲಿ ನಿಯಮಪರಿಸಂಖ್ಯಾವಿಧಿಗಳೂ ಇಲ್ಲ. ಆದುದರಿಂದ ಶಿಖಾಯಜ್ಞೋಪವೀತಿನಃ ಎಂಬ ವಿಶೇಷಣವು ವೀರಶೈವರಿಗೆ ಶಿಖಾಯಜ್ಞೋಪವೀತಗಳನ್ನು ವಿಧಿಸಲಾರದು. ಮೂಲತಃ ಇದುವೀರಶೈವ ವಿಷಯಕವಲ್ಲ. ವಾದಕ್ಕಾಗಿ ಹಾಗೆ ಹಿಡಿದರೂ ಶಿಖಾಯಜ್ಞೋಪವೀತಗಳಿದರಿಂದ ವಿಧಿಸಲ್ಪಡಲಾರವು.

ಬಿಜ್ಜಳನು ಜೈನನಿದ್ದುದು ನಿಜವು. ಶ್ರೀಬಸವೇಶನು ಬಿಜ್ಜಳನ ಪ್ರಾರ್ಥನೆಯಂತೆ ಮಂತ್ರಿಪದವನ್ನು ವಹಿಸಿದನು. ಇದರಿಂದ ಶ್ರೀಬಸವೇಶನ ಯೋಗ್ಯತೆಗೆ ಆವ ಕೊರತೆ ಇಲ್ಲವೆಂದು ಲೇಖದ ಪ್ರಾರಂಭದಲ್ಲಿಯೆ ತೋರಿಸಿರುವೆನು.

ಧರ್ಮರೂಪನೂ ಪೂರ್ಣಾನಂದಮಯನೂ, ಆದ ವೃಷಭೇಶನ ಅಪರಾವತಾರನಾದ ಶ್ರೀಮಂತ್ರಮೂರ್ತಿ ಬಸವನಿಗೆ ರಾಜಪದದಲ್ಲಿ ಆತೆ ಇರಲಾರದು. ಆ ಸಚ್ಚಿದಾನಂದ ಮಯಮೂರ್ತಿಧ್ಯಾನವನ್ನು ಮಾಡಿದವರಿಗೆ ಪೂರ್ಣಾನಂದವು ದೊರಕುತ್ತಿರಲು ಆತನು ತುಚ್ಛವಾದ ರಾಜಪದವಿಯನ್ನೇನು ಮಾಡುವನು ?

ಬಸವನು ನಿರ್ಮಲ ಮನಸಿನಿಂದ (ಧರ್ಮಮೂರ್ತಿಯಲ್ಲಿ ಮಲೋಭವಾಲಿಪ್ಸ್ಯವು ಸಂಭವಿಸಲಾರದು.) ಸ್ವೀಕರಿಸಿದರಿಂದಲೆ ಮುಂದಿನ

ಸಂಗತಿಗಳನ್ನು ಬಿಜ್ಜಳನಿಗೆ ಎಚ್ಚರವನ್ನು ಕೊಟ್ಟನು. ದುಷ್ಟಮನಸಿನಿಂದ ಮಂತ್ರಿಪದವನ್ನು ಸ್ವೀಕರಿಸಿದ್ದರೆ ಬಿಜ್ಜಳನಿಗೆ ಹಿತೋಪದೇಶವನ್ನು ಮಾಡುತ್ತಿರಲಿಲ್ಲ. ಪಾಪಿಷ್ಠನೇ ನೋಡು:— ದೇಶದೇಶಾಂತರೇಭ್ಯಸ್ತು ಶಿವಭಕ್ತಾ ಮನಸ್ವಿನಃ । ಮಾಮುದ್ದಿಶ್ಯಾಗಮಿಷ್ಯಂತಿ ತೇಷಾಂ ತ್ವತ್ಪುರವಾಸಿನಾಂ । ಜನಾನಾಂ ಕಲಹೇಪ್ರಾಪ್ತೇ ಭಕ್ತೇಷ್ವಾಪಾದಯಂತ್ಯಘಂ । ತವಕ್ರೋಧೋಹ್ಯಧಿಭವೇದ್ದುಷ್ಪ್ರಧರ್ಷಾಶ್ಚ ತೇ ಸ್ಮೃತಾಃ । ತೇನವ್ಯಾಕುಲಿತಂ ಸರ್ವಂ ಭವೇದ್ರಾಜ್ಯಂ ಮಹೀಪತೇ ॥ ಕೋಶಾಗಾರಸ್ಥಿತಂ ದ್ರವ್ಯಂ ಸರ್ವಂ ಬಸವಮಂತ್ರಿರಾಟ್ । ಭಕ್ತೇಭ್ಯಶ್ಚಪ್ರದದೌನಾನಾಮಣಿಗಣೋಜ್ಜ್ವಲಂ। ಇತೀರ್ಷ್ಯಯಾವದಿಷ್ಯಂತಿತವೈತೇಮಂತ್ರಿಸತ್ತಮಾಃ ॥ ತೇನಜಾಯೇತತೇಕ್ರೋಧೋ ಮಯಿದೋಷವಿವರ್ಜಿತೇ । ಸಮ್ಯಕ್ಪರೀಕ್ಷಣೀಯಂತಸ್ಸಹಸಾಮಾಕುರುಪ್ರಭೋ। ಬುದ್ಧ್ಯಾನಾಲೋಚಿತಂ ಕಾರ್ಯಂ ಕರೋಷಿಪ್ರಭುಸತ್ತಮ। ವಿಗಣಯ್ಯಚತತ್ಸರ್ವಂ ವಿನಿವೇದ್ಯತವಪ್ರಭೋನಾಹಂ ವಸಾಮಿರಾಜ್ಯೇಸ್ಮಿನ್ ಪ್ರತಿಜ್ಞಾತಮಿದಂಮಯಾ ॥ ಸುಮನಸ್ಕರಾದ ಶಿವಭಕ್ತರು ದೇಶ ದೇಶಗಳಿಂದ ನನ್ನನ್ನುದ್ದೇಶಿಸಿ ಬರುವರು. ಅವರ ಮತ್ತು ನಿನ್ನ ನಗರವಾಸಿಗಳ ನಡುವೆ ಕಲಹ ಏಳಲು ನಿರ್ದೋಷಿಗಳಾದ ಭಕ್ತರ ಮೇಲೆ ಸುಳ್ಳು ಅಪರಾಧಗಳನ್ನು ಹೊರಿಸುವರು. ಅದರಿಂದ ನೀನು ಸಿಟ್ಟಿಗೇಳುವಿ. ಮಣಿ ಮುಕ್ತಾದಿಗಳಿಂದ ತುಂಬಿದ ಭಂಡಾರವನ್ನೆಲ್ಲ ಬಸವಮಂತ್ರೀಶನು ಭಕ್ತರಿಗೆಯೆ ಕೊಟ್ಟನು; ಎಂದಿಂತಾಗಿ ನಿನ್ನ ಉಳಿದ ಮಂತ್ರಿಗಳು ದೂರುವರು. ಅದನ್ನು ಕೇಳಿ ದೋಷಲೇಶವಿಲ್ಲದ ನನ್ನಲ್ಲಿ ನಿನಗೆ ಕ್ರೋಧ ಅಂಕುರಿಸುವುದು. ಅಂತಹ ಪ್ರಸಂಗದಲ್ಲಿ ಚನ್ನಾಗಿ ಪರೀಕ್ಷಿಸು. ವಿಚಾರವಿಲ್ಲದೆ ಕಾರ್ಯಾರಂಭವನ್ನು ಮಾಡಬೇಡ. ನೀನು ಆಲೋಚನವಿಲ್ಲದೆ ಸಹಸಾ ಕಾರ್ಯವನ್ನು ಮಾಡಿದುದಾದರೆ ಅದನ್ನೆಲ್ಲ ಲಕ್ಷದಲ್ಲಿ ತಂದು ನಿನ್ನ ಒಡವೆಯನ್ನು ನಿನಗೊಪ್ಪಿಸಿ ನಿನ್ನ ರಾಜ್ಯದಲ್ಲಿ ನಾನಿರದೆ ಹೊರಡುವೆನು. ಇದೇ ಪ್ರತಿಜ್ಞೆಯು." ಇದರಲ್ಲಿ ದುಷ್ಟತನವೆಲ್ಲಿದೆ! ತಾನು ಶಿವಭಕ್ತಶಿಖಾಮಣಿಯಾಗಿರುವುದರಿಂದ ದೇಶ ದೇಶಗಳಿಂದ ಶಿವಭಕ್ತರಾದ ಜಂಗಮರು ತನ್ನ ಕೈಂಕರ್ಯವನ್ನು ತೆಗೆದುಕೊಳ್ಳಲಿಕ್ಕೆ ಬ

ಸುವರೆಂತಲೂ, ಬ್ರಾಹ್ಮಣರಿಂದಲೂ ಜೈನರಿಂದಲೂ ತುಂಬಿದ ಬಿಜ್ಜಳನ ಪಟ್ಟಣದ ನಾಗರಿಕರು ಆಸೂಯೆಪಡುವರೆಂತಲೂ, ಸಚಿವರು ಈರ್ಷ್ಯೆಯಿಂದ ತನ್ನನ್ನು ದೂರುವರೆಂತಲೂ ಶ್ರೀಬಸವೇಶನು ಬಿಜ್ಜಳನಿಗೆ ಎಚ್ಚರಿಸಿದುದು. ಆಶ್ಚರ್ಯವಲ್ಲ. ತ್ರಿಕಾಲಜ್ಞಾನನಾದ ಬಸವನಿಗೆ ಇವೆಲ್ಲ ಗೋಚರಿಸಿದುದು ಸೋಜಿಗವಲ್ಲ. ಕಾರ್ಯಕಾರಣಭಾವವನ್ನು ಲೋಕವೃತ್ತವನ್ನೂ ಅರಿಯುವ ಒಬ್ಬಾತನೊಬ್ಬ ವಿಚಕ್ಷಣನಿಗಾದರು ಈ ಸಂಗತಿಗಳು ತಿಳಿಯಬಹುದಾಗಿತ್ತು. ಪ್ರಾಕೃತ ಬ್ರಾಹ್ಮಣರು ಅನೇಕ ಕಾಲದಿಂದ ತಮ್ಮ ವರ್ಣಶ್ರೇಷ್ಠತೆಯನ್ನು ಅನುಭವಿಸುತ್ತ ಬಂದವರು. ಅವರಲ್ಲಿ ಬೇಕಾದಂತಹ ತತ್ವಜ್ಞಾನಿಗಳಿಗಾಗಲಿ, ಉದಾತ್ತ ತತ್ವಗಳನ್ನು ಬೋಧಿಸುವವರಿಗಾಗಲಿ ತಮ್ಮ ವರ್ಣಶ್ರೇಷ್ಠತೆಯನ್ನು ಸಾಧಿಸುವುದೂ ಉಳಿದ ವರ್ಣದವರನ್ನು ತಮ್ಮ ವರ್ಣದ ಅಂಕಿತದಲ್ಲಿಡುವುದೂ ಹುಟ್ಟುಗುಣವಾಗಿದ್ದಿತು. “ಜಗತ್ತೆಲ್ಲ ಮಿಥ್ಯೆ ಆತ್ಮನೊಬ್ಬನೆ ಸತ್ಯ. ವೇದಾದಿಗಳು ನಿಷ್ಕಲಂಕವಾದಾತ್ಮತತ್ವವನ್ನು ಬೋಧಿಸುತ್ತವೆ. ಅವುಗಳ ಪರಮತಾತ್ಪರ್ಯವು ಜ್ಞಾನದಲ್ಲಲ್ಲದೆ ಕರ್ಮದಲ್ಲಿಲ್ಲ. ಅನಾತ್ಮಜ್ಞರಿಗಲ್ಲದೆ ಜ್ಞಾನನಿಷ್ಠರಿಗೆ ಕರ್ಮಕಾಂಡವು ಪ್ರಮಾಣವಲ್ಲ” ಎಂಬ ಅದ್ವೈತ ತತ್ವವನ್ನು ಬೋಧಿಸಿದ ಶಂಕರಾಚಾರ್ಯರು ಸಹ “ಶೂದ್ರನಿಗೆ ಎಂತಹ ಸಂಸ್ಕಾರಗಳಿಂದಲೂ ಸಾಕ್ಷಾತ್ತಾಗಿ ಉಪನಿಷಚ್ಛ್ರವಣದಲ್ಲಿ ಅಧಿಕಾರವು ಬರಲಾರದು. ತ್ರೈವರ್ಣಿಕರಲ್ಲೂ, ಬ್ರಾಹ್ಮಣನೇ ಮುಖ್ಯಾಧಿಕಾರಿಯು ಅದರಲ್ಲಿಯೂ ಗೃಹಸ್ಥನು ಬ್ರಹ್ಮನಿಷ್ಠನಾಗಲಾರನು. ಚತುರ್ಥಾಶ್ರಮಿಗಲ್ಲದ ಬ್ರಹ್ಮಸಂಸ್ಥನೆಂಬ ಜೀವನ್ಮುಕ್ತಿಯು ಲಭಿಸದು” ಎಂದು ಸಿದ್ಧಾಂತವನ್ನು ಹೇಳಿದರು. ಇಂತಹ ಅದ್ವೈತಾಚಾರ್ಯರ ವಿಚಾರಸರಣಿಯು ಹೀಗಾದ ಬಳಿಕ ಉಳಿದ ವಿಶಿಷ್ಟಾದ್ವೈತಿಗಳ ಹಾಗೂ ದ್ವೈತಿಗಳ ಪ್ರವೃತ್ತಿಯು ಎಂತಿರಬಹುದೆಂಬುದು ಊಹಿಸಲವಕಾಶವಿದೆ. “ಕೇವಲ ತಮ್ಮ ವರ್ಣದ ಪ್ರಾಶಸ್ತ್ಯವನ್ನೆಬೆಳೆಸುತ್ತಬಂದ ಬ್ರಾಹ್ಮಣರ ವರ್ಚಸ್ಸು ದೇವನಿರ್ಮಿತವಲ್ಲ. ಆದನ್ನವರು ಪರಮಾತ್ಮನು ಸರ್ವರಿಗೂ ಕೊಟ್ಟಿರುವ ಧರ್ಮಸ್ವತಂತ್ರತೆಯನ್ನು ಬುದ್ಧಿಸ್ವತಂತ್ರತೆಯನ್ನೂ ಮೂಲೆಗುಂಪು ಮಾಡಿ ಉಳಿದ ವರ್ಣದವರನ್ನು [illegible]

ಶಕ್ತಿ ಸಂಪಾದಿಸಿರುವರು. ಮಾನುಷ ದೈವಸಂಪತ್ತಿಯಿಂದಲ್ಲದೆ ಕೇವಲ ಜಾತಿಯಿಂದಲಾವನು ಯೋಗ್ಯನೆನಿಸನು. ಈ ಕಲ್ಪಿತ ವರ್ಣಾಸ್ತಿನೀಡ ಮುಂದುವರಿಯುವ ಬ್ರಾಹ್ಮಣರ ಕವನಗಳಿಗೆ ಲಕ್ಷ್ಯಗೊಡದೆ ನೀಮಲ್ಲಿರುವ ಸದ್ಗುಣದಿಂದ ಅಂಗ ತತ್ವದ ವಿಕಾಸವಾಗುತ್ತ ಲಿಂಗತತ್ವದಲ್ಲಿ ಪರಿಪೂರ್ಣತೆಯನ್ನು ಹೊಂದಿ ನರಜನ್ಮವನ್ನು ಸಾರ್ಥಕಪಡಿಸಿರಿ. ಜೈನಾದಿ ಮತಗಳವರು ಕಲಿಸುವ ನಿರೀಶ್ವರವಾದವನ್ನು ನಂಬಿ ನಾಸ್ತಿಕರಾಗಬೇಡರಿ. ಜಗಚ್ಚಕ್ರಚಾಲಕನಾದ ಶಿವನನ್ನು ನಂಬಿರಿ." ಎಂದು ಬಸವೇಶನ ತತ್ವಮಾರ್ಗವಿತ್ತು. ಇದು ಬ್ರಾಹ್ಮಣರಿಗೆ ಕೆಡುಕಾಗಿ ತೋರುವುದು ಸ್ವಕೀಯಾನುಭವದಿಂದಲೆ ಗೊತ್ತಾಗಿತ್ತು. ಜೈನ ತತ್ವಗಳು ಕರ್ಮಕಾಂಡ ಹಂಬಲವನ್ನು ಬಿಡದ ಬ್ರಾಹ್ಮಣರ ಯಜ್ಞಯಾಗಾದಿಗಳು ಹಿಂಸಾತ್ಮಕವಾಗಿರುವುವೆಂದೂ ದಯವೇ ಪರಮಧರ್ಮವೆಂದೂ ಬೋಧಿಸಿ ಜನರನ್ನು ನಿರೀಶ್ವರ ಮಾರ್ಗಕ್ಕೆ ಹಚ್ಚಿದುವು. ಶ್ರೀಬಸವೇಶನು ಕರ್ಮಕಾಂಡವನ್ನು ಬದಿಗಿಟ್ಟು ಭಕ್ತಿಜ್ಞಾನಕಾಂಡಗಳ ಮಹತ್ವವನ್ನೂ ರುಚಿಯನ್ನೂ ಪ್ರಕಟಿಸಿ, ಲೋಕದಲ್ಲಿ ವೈದಿಕವಾದ ವೀರಶೈವಧರ್ಮವನ್ನು ಹಬ್ಬಿಸುವುದು ಜೈನರಿಗೆ ಅತಿದುಃಸಹವಾಗುವುದು ಸಹಜವಿತ್ತು. ಅನೇಕ ಶತಕಗಳಿಂದ ಬ್ರಾಹ್ಮಣರ ವರ್ಣಸತ್ತೆಗೆ ಬೇಸತ್ತ ಜನರಲ್ಲಿ ಸ್ವಾಭಿಮಾನದ ಅಂಕುರವುಳ್ಳವರು ದಯಾಸಾರವಾದ ಜಿನಧರ್ಮದತ್ತ ಒಲಿದಿದ್ದರು. ಆದರೆ ಜಿನಧರ್ಮದಲ್ಲಿ ಈಶ್ವರನ ಸದ್ಭಾವವೆ ನಿಷೇಧಿಸಲ್ಪಟ್ಟು ನಾಸ್ತಿಕಪರರಾಗುವವುದು ಅನೇಕರಿಗೆ ಒಪ್ಪದ ಮಾತಾಗಿದ್ದಿತು. ಅಂತಹ ಭಕ್ತಿಪ್ರಿಯರು ವರ್ಣಬ್ರಾಹ್ಮಣ್ಯದಲ್ಲಿಯ ಅನಿಷ್ಟಾಂಶಗಳಿಲ್ಲದ ಮತ್ತು ಜಿನಧರ್ಮದಷ್ಟೇ ದಯಾಪರಮವಾದ ವೀರಶೈವ ಧರ್ಮವನ್ನು ಸ್ವೀಕರಿಸುವುದು ಅಪರಿಹಾರ್ಯವಾಗಿತ್ತು. ಸೂಕ್ಷ್ಮಮತಿಯಾದ ಆವನೊಬ್ಬನಿಗೆ ತಿಳಿಯುವ ಇವೆಲ್ಲ ಸಂಗತಿಗಳು ಬಸವನಿಗೆ ತೋರಿ ಆತನು ಬಿಜ್ಜಳನಿಗೆ ಮುನ್ನೆಚ್ಚರವನ್ನಿತ್ತರೆ ದುರ್ಬುದ್ಧಿಗೆ ನಿದರ್ಶಕವೆನಬಹುದೋ ? ಇಂತಹ ಸಾಮಾನ್ಯಭವಿಷ್ಯಗಳು ತಿಳಿಯದೆ ಹೋಗಿದ್ದರೆ ಬಸವನಿಗೆ ಸುಜ್ಞನೆಂದು ಆರೂ ಅನ್ನುತ್ತಿರಲಿಲ್ಲ. ಬಿಜ್ಜಳನಿಗೆ ಬಸವನಾದರು ನಿನ್ನ ಮುಂದೆ ಎಷ್ಟುದೂರುಗ

ಳು ಜಂಬರೂ ಅಲಕ್ಷಿಸೆಂದು ಹೇಳಿಲ್ಲ. ನೀನು ಮಾಡುವ ಕಾರ್ಯಗಳ ನ್ನು ಉಭಯ ಪಕ್ಷಗಳ ವೃತ್ತಾಂತವನ್ನು ತುಂಬಾ ಚನ್ನಾಗಿ ಅರಿತು ಕೂಡೆಂದು ಹೇಳಿರುವನು. ಇದರಿಂದ ರಾಜ್ಯಹರಣ ಮಾಡುವ ಉದ್ದೇ ಶವು ಬಸವನಲ್ಲಿ ಎಳ್ಳಷ್ಟು ಇದ್ದಿಲ್ಲವೆಂದು ಸ್ಪಷ್ಟವಾಗುತ್ತದೆ. ಇರ ಲಿ ಬಸವೇಶನ ವಚನಗಳಿವೆ. ಅವುಗಳಲ್ಲಿ ಒಂದನ್ನಾದರು ರಾಜನಾಗ ಬೇಕೆಂಬ ಉದ್ದೇಶವನ್ನು ವ್ಯಕ್ತಪಡಿಸುತ್ತದೆಂದು ಕೈಯಿಟ್ಟು ತೋರಿ ಸಲಿಕ್ಕೆ ವಾದಿ ಚಂಡಾಲರು ಸಮರ್ಥರಾಗುವರೂ ? ಲೌಕಿಕ ಸಂಪತ್ತಿನ ಲ್ಲಿ ಆತನ ಜುಗುಪ್ಸೆಯನ್ನು ನೋಡು " ಬಿದಿರಲಂಡಣವಕ್ಕು ಬಿದಿರ ಸ ತ್ತಿಗೆಯುಕ್ಕು ಬಿದಿರ ಗುಡಿಯು ಗುಡಾರವಕ್ಕು ಬಿದಿರಲ್ಲಿ ಸಕಲಸಂಪದ ವಕ್ಕು ಬಿದಿರಿನವರ ಮೆಚ್ಚನಮ್ಮ ಕೂಡಲಸಂಗಮದೇವ" ಭಕ್ತಿ. ಸ್ಥಳ ೩೦೭. "ಸಂಸಾರವೆಂಬ ಶ್ವಾನವನಟ್ಟಿ ವಿಷಸಲವ ಬೀಸರವ ಮಾಡದಿರ ಯ್ಯ. ಎನ್ನಚಿತ್ತ ನಿಮ್ಮ ಧ್ಯಾನವಯ್ಯ ನೀವಲ್ಲದೆ ನುತ್ತೆನಾನರಿಯೆ ನು. ಕೆನ್ನೆಯಲ್ಲಿ ಕೈವಿಡಿದೆನು ಮನ್ನಿಸು ಕಂಡಮಹಾಲಿಂಗವೆ. ಸತಿ ಯಾನು ಪತಿನೀನು ನಿಮಗೋತ ಮನವ ಅನ್ಯಕ್ಕೆ ಹರಿಸಿದರೆ ನಿನ್ನಳಿ ಮಾನಹಾನಿಕೂಡಲ ಸಂಗಮದೇವ." ಭಕ್ತಿಸ್ಥಳ ೫೦೮ ಈ ವಚನದ ಲ್ಲಿ ಬಸವನು ಕೇವಲ ಶಿವೈಕತಾನವಾದ ಚಿತ್ತವನ್ನು ವ್ಯಕ್ತೀಕರಿಸಿರು ವನು. ಇದರಲ್ಲಿ ಎರಡು ದೃಷ್ಟಾಂತಗಳಿವೆ. ದೇವರಿಗೆಂದು ಶಿವ ಸಲಡಿಗೆಯ ನೈವೇದ್ಯವನ್ನು ಮಾಡುವರು. ಅದನ್ನು ನಾಯಿಗಳು ಮುಟ್ಟದಂತೆ ಜೋಕೆಯಾಗಿರುವರು. ಅದರಂತೆ ಈ ನನ್ನ ಮನವು ಮಹಾದೇವನೆ ನಿನಗೆ ವಿಷಸಲಾಗಿದೆ. ಶ್ವಾನವು ವಿಷ ಸಲಡಿಗೆಯನ್ನು ಮುಟ್ಟುವಂತೆ ಸಂಸಾರವು ಅದನ್ನು ಸೋಂಕಿ ವಿಷಸ ಲು ಮುರಿಯದಂತೆ ಮಾಡಯ್ಯ ದೇವನೆ ಎಂದು ಮೊದಲನೆಯ ದೃಷ್ಟಾಂ ತವು. ಪತಿವ್ರತಾ ಸ್ತ್ರೀಯಳು ತನ್ನ ಚಿತ್ತದಲ್ಲಿ ಪತಿಯ ಹಾವಭಾವ ವಿಲಾಸಗಳನ್ನಲ್ಲದೆಯೂ ಆತನ ಪಾದಸೇವೆಯನ್ನಲ್ಲದೆಯೂ ಬೇರೊಂದು ಅರಿಯಳು. ಆಕೆಯ ಚಿತ್ತವು ಪತಿಧ್ಯಾನವು ಎಂಬೆರಡಕ್ಕೆ ಅಗಲಿಕೆ ಇಲ್ಲ. ಪತಿಯು ಪ್ರಸನ್ನನಿರದಿದ್ದರೆ ಆಕೆಯು ಚಿಂತಾಮಗ್ನಳಾಗಿ ಕೆ ...ನೆ ... ಪ್ರಾಣತ್ಯಾಗ ... ಮಾಡುವಳು. ಅದರಂತೆಯೆ ಸತಿ

ಯಾದ ತನ್ನ ಮನವು ಪತಿಯಾದ ಲಿಂಗದೇವನ ಕಳಾವಿಳಾಸವನೆನೆಯುತ್ತಿದೆ. ಲಿಂಗಪತಿಯನ್ನುಳಿದು ಉಳಿದ ಸಾಂಸಾರಿಕ ಸಂಪತ್ತಿಯನ್ನು ಬಯಸಿದೆನಾದರೆ ಲಿಂಗಯ್ಯನೇ ಸತಿಯ ಕೊಂದು ಪತಿಯುಂಬಂತೆ ಅಂತೆಯೆ ನನ್ನ ಕೊಂದು ನಿನ್ನದಯ್ಯ ಎಂಬುದು ಎರಡನೆಯ ದೃಷ್ಟಾಂತವು. ಇಂತಹ ಅನೇಕ ವಚನಗಳನ್ನು ಉದಾಹರಿಸಬಹುದು. ಈ ತೆರನಾದ ವೈರಾಗ್ಯಶೀಲನೂ, ಶಿವಭಕ್ತಿಯ ಮೂರ್ತಿಯೂ ರಾಜ್ಯಸಂಪದವನೆಳಸುವನೇ. ರಾಜ್ಯಲೋಭವಿಲ್ಲದಿರಲು ಬಿಜ್ಜಳನನ್ನು ಕೊಲ್ಲಿಸಲಾಶಿಸುವ ಕಾರಣವೇನು? ಇರಲಿ, ಬಸವನು ತನ್ನ ಅಧಿಕಾರದ ಬಲದಿಂದ ಬಿಜ್ಜಳನ ಸೈನಿಕರನ್ನು ಒಡಿಸಿದ ಅಥವಾ ಇತರ ಅಧಿಕಾರಸ್ಥರನ್ನು ತನ್ನ ಸಂಚಿಗೆ ಕೂಡಿಸಿಕೊಂಡ ಪ್ರಮಾಣಗಳನ್ನೇನಾದರು ಈ ಕುತರ್ಕಿಗಳು ತೋರಿಸಬಲ್ಲರೊ? ಮುಂಚಿತವಾಗಿಯೆ ಬಸವನು ಬಿಜ್ಜಳನನ್ನು ಕೊಲ್ಲಿಸುವ ವಿಚಾರದಲ್ಲಿದ್ದರೆ ಸೈನಿಕರನ್ನು ತಿರುಗಿಸುವುದು ಮುಂತಾದವುಗಳು ಜರುಗುತ್ತಿರಲಿಲ್ಲವೆ? ಬರೇ ಪುಂಡಜಂಗಮರೆಂಬ ಅಶಿಕ್ಷಿತ ಸೈನಿಕರಿಂದ ತನ್ನ ಕಾರ್ಯವು ನೆರವೇರುವುದೆಂದು ಬಗೆಯುವಷ್ಟು ಬುದ್ಧಿಹೀನನಿದ್ದನೆ ಬಸವನು?

ಬಿಜ್ಜಳನು ತನ್ನ ಪಾಪಕೃತ್ಯದ ಫಲವನ್ನನುಭವಿಸಿದನು. ಅಲ್ಲಯ್ಯ ಮಧುವಯ್ಯಗಳ ಕಂಣನ್ನು ನಿಷ್ಕಾರಣವಾಗಿ ಕೀಳಿಸಿದನು. ಈ ಶರಣರೀರ್ವರಲ್ಲಿ ಏನಪರಾಧವಿದ್ದಿತೆಂದು ವಾದಿಗಳು ತೋರಿಸಬಲ್ಲರೊ? ಅವರೀರ್ವರ ಕಂಣನ್ನು ಬಿಜ್ಜಳನು ಕೀಳಿಸಲೆ ಇಲ್ಲವೆಂದಾದರು ಹೇಳಲಿಕ್ಕೆ ಸಮರ್ಥರಾಗುವರೊ? ಕಂಣುಗಳನ್ನು ಕೀಳಿಸಿದುದು ನಿಜವಿದ್ದ ಬಳಿಕ ಬಿಜ್ಜಳನೆ ಅಪರಾಧಿಯಲ್ಲವೆ? ಶಿವಭಕ್ತ ದ್ರೋಹವನ್ನೂ ಶಿವದ್ರೋಹವನ್ನೂ ಸೈರಿಸಕೂಡದು, ದ್ರೋಹಿಗಳನ್ನು ಶಿಕ್ಷಿಸಬೇಕು. ಎಂಬ ಗಣಾಚಾರದಿಂದ ಬಸವಾದಿ ಪ್ರಮಥರು ಬಿಜ್ಜಳನನ್ನು ಶಿಕ್ಷಿಸುವುದು ಅವಶ್ಯಪ್ರಾಪ್ತವಾಗಿತ್ತು. "ಗುರುಲಿಂಗಾದಿ ವಿಷಯಂ ನಶ್ರಾವ್ಯಂ ದೂಷಣಂ ಯದಿ। ಶ್ರುತಂ ತಾನ್ ಶಿಕ್ಷಯಾನೀತಿ ಗಣಾಚಾರಃ ಸಹಿ ಸ್ಮೃತಃ" ಸೂಕ್ಷ್ಮಾಗಮ ಪಟಲ ೮, ಶ್ಲೋ. ೧೮. ಗುರುವು ಲಿಂಗವು ಮುಂತಾದವುಗಳ ನಿಂದೆಯನ್ನು ಕೇಳಕೂಡದು. ಕೇಳಿದುದಾ

ವರಿ ನಿಂದಕರನ್ನು ದಂಡಿಸುವೆನು ಎಂಬೀ ವ್ರತವು ಗಣಾಚಾರವೆಂದು ನಿ ನಹಿಸಲ್ಪಟ್ಟಿತು. ಈ ಶ್ಲೋಕದಲ್ಲಿ ಆದಿ ಎಂಬ ಪದದಿಂದ ಭಕ್ತನಿಂ ದೆಯನ್ನೂ ಕೇಳಕೂಡದು. ಕೇಳಿದರೆ ನಿಂದಕರನ್ನು ಶಿಕ್ಷಿಸುನೆಂಬ ನಿಷ್ಠ ಯುನ್ನೂ ಗಣಾಚಾರವೆನಿಸುತ್ತದೆಂದು ಸಿದ್ಧವಾಗುವುದು. "ಭಕ್ತದ್ರೋ ಹಸಮಂ ಪಾಪಂ ನಭೂತಂ ನಭವಿಷ್ಯತಿ।" ಅಜ್ಞಾನದಥವಾ ಲೋಭಾ ತ್ಸ್ವೇಷಾದು ಪಕೃತಂ ಚಯತ್ । ಕಲ್ಪಾವಸಾನಪರ್ಯಂತಂ ಸೋಂ ಘೋ ರಮಸಿ ಮಜ್ಜತಿ ॥ ಎಂಬೀ ಸೂಕ್ಷ್ಮಾಗಮ ವಚನದಿಂದ ಭಕ್ತದ್ರೋಹ ವು ಮಹತ್ತರವಾದ ಪಾಪವೆಂದು ಸಿದ್ಧವಾಗುವುದು. ಆದುದರಿಂದ ಭಕ್ತರಾದ ಅಲ್ಲಯ್ಯ ಮಧುವಯ್ಯಗಳ ನೇತ್ರಗಳನ್ನು ಕೀಳಿಸಿದ ಬಿಜ್ಜ ಳನು ದಂಡಾರ್ಹನಿದ್ದನು. ಬಿಜ್ಜಳನದಿದು ಪ್ರಥಮಾಪರಾಧವಲ್ಲ. ಶ್ರೀ ಸೂಜಯ್ಯನನ್ನು ಕೊಲ್ಲಿಸಲು ಮಾಡಿದ ಪ್ರಯತ್ನಾಪರಾಧ, ಶ್ರೀನಾ ಗಲಾಂಬಿಕೆಯನ್ನು ಸಭೆಯಲ್ಲಿ ಅಪಮಾನ ಮಾಡಲೆಣಿಸಿದ ಪಾಪ, ಇವೇ ಮೊದಲಾದ ಅನೇಕಾನೇಕ ದುಷ್ಕೃತಿಗಳನ್ನು ಶರಣರು ಕ್ಷಮಿಸಿದರು. ದುರುಳರ ಮಾತಿಗೆ ಕಿವಿಗೊಟ್ಟು ಬಿಜ್ಜಳನು ಪಾಪಕ್ಕೆ ಹೇಸದೆ ಶರಣರ ಕೊಲೆಯನ್ನು ಮಾಡಿಸಿದನು. ಇಂತಹ ರಾಜನನ್ನು ಕೊಲ್ಲುವುದು ಆಗಿನ ಸಂದರ್ಭದಲ್ಲಿ ನ್ಯಾಯವಾಗಿತ್ತು. ಬಿಜ್ಜಳನನ್ನು ಕೊಲ್ಲದೆ ವೀರಶೈವ ಸಮಾಜವು ಉಳಿಯುತ್ತಿರಲಿಲ್ಲ. ವೈದಿಕಾಗಮಿಕ ಗ್ರಂಥಗಳಲ್ಲಿ ಈ ಧರ್ಮತತ್ವಗಳು ಅಧಿಕವಾಗಿರುವುದರಿಂದಲು ವ್ಯಾಸೋಕ್ತ ಉಪಬ್ರ ಹ್ಮಣಗಳಲ್ಲಿ ಇವುಗಳ ಪ್ರಾಶಸ್ತ್ಯವು ಕಂಡುಬರುವುದರಿಂದಲೂ ವೀರ ಶೈವ ಧರ್ಮವು ವೈದಿಕವಾದುದು, ಅದರಿಂದಲೆ ಸನಾತನವಾದುದು. ಆದರೆ ಅರ್ವಾಚೀನ ಕಾಲದಲ್ಲಿ ಈ ತತ್ವಗಳು ವರ್ಣಬ್ರಾಹ್ಮಣ್ಯ ಧ ರ್ಮಗಳಿಂದ ಹಿಂಜರಿದುದಾಗಿ ವಿಶೇಷವಾಗಿ ಆಚರಣೆಯಲ್ಲಿದ್ದಿಲ್ಲ. ಪರಕೀ ಯರಾದ ಗ್ರೀಕರು ಚೀನರು ಮೊದಲಾದ ಪ್ರವಾಸಿಕರು ಈ ದೇಶದಲ್ಲಿ ಸಂಚರಿಸಿರುವರು. ಬಾಣನು ಹರ್ಷ ಚರಿತವನ್ನು ಬರೆದಿರುವನು. ಈ ಯಾವ ಗ್ರಂಥಗಳಲ್ಲಿಯೂ ವೀರಶೈವ ಸಮಾಜದ ಉಲ್ಲೇಖವು ಕಂಡುಬರುವುದಿಲ್ಲ. ಬಸವನು, ಸನಾತನವಾದರು ಖಿಲವಾಗಿದ್ದ ಸುಮ ಧರ್ಮವನ್ನು ಉದ್ಧರಿಸ[illegible]ದನ್ನು ಪೂರ್ವಕಾಲದ ಋ

ಹಿಗ್ಗಳೂ ಶರಣರೂ ಆಚರಿಸಿದಂತೆ ವ್ಯವಹಾರದಲ್ಲಿ ತಂದನು. ಆಗಲೆ ಜನಸಾಮಾನ್ಯದಲ್ಲಿ ಈ ಮತವು ಪ್ರಸಾರವಾಗ ಹತ್ತಿತ್ತು. ಇಂತಹ ಸಮಯದಲ್ಲಿ ರಾಜನಿಂದ ಶರಣ ಹತಿಯನ್ನು ಸಹನ ಮಾಡಿದ್ದರೆ ಲಿಂಗಾಯತ ಧರ್ಮವು ಮೂಲಿಗೆ ಬೀಳುತ್ತಿತ್ತು. ಬಸವಾದಿ ಪ್ರಮಥರು ತಂಮ ಸಮಾಜವನ್ನು ಧರ್ಮವನ್ನು ಸ್ಥಾಪಿಸಿದುದರ ಮೇಲೆಯೆ ಈ ವರು ಕಲಿಸಿದ ಗುರು ಜಂಗಮ ಭಕ್ತಿಯ ಮೇಲೆಯೆ ಅಸ್ತಿತ್ವದಲ್ಲಿ ಇದ ಮಠಗಳಿಗಧಿಕಾರಿಗಳಾಗಿ ಈ ಕಾಶೀನಾಥನ ಅನುಯಾಯಿಗಳಾದ ಉಜ್ಜನಿ ಮೊದಲಾದ ಮಠಸ್ಥರು ಬಸವಾದಿ ಪ್ರಮಥರನ್ನು ಧಿಕ್ಕರಿಸ ಹತ್ತಿರುವರಲ್ಲವೆ. ಅಲ್ಲಯ್ಯ ಮಧುವಯ್ಯಗಳ ಕೊಲೆಯನ್ನು ಸೈರಿಸಿದ್ದರೆ ಈ ಸಮಾಜವೂ ಇರುತ್ತಿರಲಿಲ್ಲ, ಈ ಧರ್ಮವೂ ಉಳಿಯುತ್ತಿರಲಿಲ್ಲ. ಕಾಶೀನಾಥನ ಪಕ್ಷವು ಬೊಗಳುವಂತೆ ಬಸವೇಶನು ಪೂರ್ವದಲ್ಲಿ ನಡೆದು ಬಂದ ಮಾಹೇಶ್ವರವೆಂಬ ಗುರುವರ್ಗವಿದ್ದರೆ ಆ ಗುರುವರ್ಗದವರು ತಂಮ ಮತವನ್ನು ಬಸವನು ಕೆಡಿಸುತ್ತಿರುವನೆಂದು ಬಿಜ್ಜಳನ ಮುಂದೆ ದೂರದೆ ಉಳಿಯುತ್ತಿದ್ದಿಲ್ಲ. ಬಸವೇಶನ ಉದಾತ್ತವಾದ ಮತಪ್ರಸಾರದಿಂದ ತಂಮ ವರ್ಚಸ್ಸು ಕಡಿಮೆಯಾಗ ಹತ್ತಲು ಬ್ರಾಹ್ಮಣರು ಬಿಜ್ಜಳನಲ್ಲಿ ದೂರಿಟ್ಟುಕೊಂಡ ಉದಾಹರಣಗಳು ಅಸಂಖ್ಯವಾಗಿವೆ. ಅಂತಹದೊಂದಾದರು ಉದಾಹರಣವನ್ನು ಕಾಶೀನಾಥನಾಗಲಿ ಅವನ ಶಿಷ್ಯರಾಗಲಿ ಅವನ ಉತ್ತೇಜಕರಾದ ಉಜ್ಜನಿ ಅಥವಾ ಕಾಶಿಯ ಮಠದ ಸ್ವಾಮಿಗಳಾಗಲಿ ಪಂಚಾಚಾರ್ಯರ ಸಂಪ್ರದಾಯದವರನ್ನು ವರು ದೂರಿಟ್ಟುಕೊಂಡರೆಂಬ ಬಗೆಯಲ್ಲಿ ತೋರಿಸುವರೊ? ಕಾಶೀನಾಥನು ಈಗ ಅನ್ನುವಂತೆ ಸ್ವತಃ ಪಂಚಾಚಾರ್ಯರ ಅಥವಾ ಅವರ ಪೀಠದ ಮಠಗಳೆಂದು ಹೇಳಿಕೊಳ್ಳುವ ಕಾಶೀ, ಮುಂತಾದ ಮಠಸ್ಥರಲ್ಲಿ ಶಿಷ್ಯರಾದರು ಬಸವನ ಕಾಲದಿಂದ ಇಂದಿನ ವರೆಗೆ ಬಸವನು ನಂಮ ಧರ್ಮವನ್ನು ಕೆಡಿಸಿದನೆಂದು ಆರೋಪವನ್ನಿಟ್ಟಿರೊ? ಎಂದೂ ಇಲ್ಲದ ಪಾಂಡಿತ್ಯವೂ ಮತತತ್ವ ವಿವೇಕವೂ ಕಾಶೀನಾಥನ ತಲೆಯಲ್ಲಿಯೆ ಮೂಡಿತೊ? ಇರಲಿ, ಶೈಶವಾವಸ್ಥೆಯಲ್ಲಿದ್ದ ವೀರಶೈವ ಸಮಾಜದ ರಕ್ಷಣೆಗಾಗಿ ಬಿಜ್ಜಳನ ವಧೆಯು ಅಪರಿಹಾರ್ಯವಾಗಿದ್ದಿತ್ತು. ರಾಜಾಜ್ಞೆಯ

ಬಲುಮೆಯಿಂದ ಜೈನರೂ ಬ್ರಾಹ್ಮಣರೂ ಲಿಂಗವಂತರನ್ನು ಉಳಿಯಗೊ ಡುತ್ತಿದ್ದಿಲ್ಲ. ರಾಜನು ಧರ್ಮಬಾಹ್ಯನಾಗಿ ನಡೆದರೆ ಅಂತ್ಯ ಪ್ರಸಂಗ ದಲ್ಲಿ ಆತನನ್ನು ವಧಿಸಬಹುದೆಂದು ಪೂರ್ವೇತಿಹಾಸವೂ ನುಡಿಯುತ್ತಿ ದೆ. ಪದ್ಮಪುರಾಣದಲ್ಲಿ ನೋಡು:— "ಪುರಾಕೃತಯುಗಸ್ಯಾದಾವಂ ಗೋ ನಾಮಪ್ರಜಾಪತಿಃ। ಮೃತ್ಯೋಸ್ತು ದುಹಿತಾತೇನ ಪರಿಣೀತಾ ತಿ ದುರ್ಮುಖೀ ॥ ಸುನೀಥಾ ನಾಮತಸ್ಯಾಸ್ತು ವೇನೋ ನಾಮಸುತಃ ಪುರಾ। ಅಧರ್ಮನಿರತಃ ಕಾಮೀ ಬಲವಾನ್ ವಸುಧಾಧಿಪಃ ॥ ಲೋಕ ಸ್ಯಾಧರ್ಮಕೃಚ್ಚಾಪಿ ಪರಭಾರ್ಯಾಪಹಾರಕಃ ಅಥತಸ್ಯ ಪ್ರಸಾದಾ ರ್ಥಂ ಜಗದರ್ಥಂ ಮಹರ್ಷಿಭಿಃ ॥ ಅನುನೀತೋಪಿನದದಾವಶುದ್ಧಾತ್ಮಾ ಭಯಂತತಃ। ಶಾಪೇನಮಾರಯಿತ್ವೈನಂ। ಸೃಷ್ಟಿಖಂಡ ಅಧ್ಯಾಯ ೮. ಶ್ಲೋಕ ೩-೮. ಅಂಗನೆಂಬ ಪ್ರಜಾಪತಿಯು ಮೃತ್ಯುವಿನ ಮಗಳಾದ ಸುನೀಥೆಯೆಂಬುವಳನ್ನು ಮದುವೆಯಾದನು. ಆಕೆಯಲ್ಲವನಿಗೆ ವೇನನೆಂ ಬ ಪುತ್ರನು ಜನಿಸಿದನು. ಅವನು ಅಧರ್ಮಪರನೂ, ಕಾಮಿಯೂ, ಆ ಗಿದ್ದನು. ಮಹರ್ಷಿಗಳು ಜಗದ್ಧಿತಾರ್ಥವಾಗಿ ಅವನನ್ನು ಸುಮಾ ರ್ಗಕ್ಕೆ ತರಲಿಕ್ಕೆ ಬುದ್ಧಿವಾದವನ್ನು ಹೇಳಿದರು. ಆದರವನು ಅದನ್ನು ಲಾಲಿಸಲಿಲ್ಲ; ಅಭಯವನ್ನು ಕೊಡಲಿಲ್ಲ. ಮಹರ್ಷಿಗಳು ಶಾಪದಿಂದವ ನನ್ನು ಕೊಂದರು. ಅದರಂತೆಯೆ ಮಾರ್ಕಂಡೇಯ ಪುರಾಣದ ಬಂಗಾಲದ ಪ್ರತಿಯಲ್ಲಿಯೂ ವೇನನನ್ನು ಮಹರ್ಷಿಗಳು ಆತನವಧಕ್ಕಾಗಿ ಕೊಂದ ರೆಂದು ಬರೆದಿದೆ. "ಹತಮ್ಯೈಲಂ ತಥಾಲೋಭಾತ್। ಮದಾದ್ವೇನಂದ್ವಿ ಜೈರ್ಹತಂ" ಮಾರ್ಕಂಡೇಯ ಪುರಾಣ ೨೭ ಅಧ್ಯಾಯ ಶ್ಲೋಕ ೧೫ ಈ ಪ್ರಮಾಣಗಳಿಂದ ಉನ್ಮಾರ್ಗವರ್ತಿಯಾದ ರಾಜನನ್ನು ಪ್ರಸಂಗ ವಿ ಶೇಷದಲ್ಲಿ ವಧಿಸಬಹುದೆಂದು ಸಿದ್ಧವಾಗುತ್ತದೆ. ಆದುದರಿಂದ ಬಿಜ್ಜ ಳನನ್ನು ಕೊಲ್ಲಲು ಶಾಸ್ತ್ರಸಮ್ಮತಿ ಇತ್ತು.

ಶ್ರೀಬಸವೇಶನು ಬಿಜ್ಜಳನ ವರ್ತನದಿಂದ ಮುಂದಾಗುವ ಶಿವ ದ್ರೋಹವನ್ನು ಅರಿತು ಜಗದೇವನಿಗೆ "ಬಹುಕಾಲೇ ವ್ಯತೀತೇತು ಶಿವ ದ್ರೋಹೋಭನಿಷ್ಯತಿ। ತಂಶಿವದ್ರೋಹಿಣಂತ್ವಂಹಿಚಾವಧೀರ್ಯಾದಿಸ

ಶ್ವರಂ । ಶಿವಸ್ತ್ವವ ಪ್ರಸನ್ನಸ್ಸ್ಯಾತ್ತ್ವವ ಶುದ್ಧಿರ್ಭವಿಷ್ಯತಿ ॥ ಇಲ್ಲಿಂ ದ ಬಹಳ ಕಾಲದಿಂದಲೂ ಶಿವದ್ರೋಹವು ಉಂಟಾಗುವುದು ಆಶಿವದ್ರೋಹಿಯನ್ನು ಕೊಂದುದಾದರೆ ಶಿವನು ನಿನಗೆ ಪ್ರಸನ್ನನಾಗುವನು. ಎಂದು ಹೇಳಿದನು. ಆದರಿಂದ ಶ್ರೀಬಸವೇಶನು ಬಿಜ್ಜಳನನ್ನು ಕೊಲ್ಲಲಿಕ್ಕೆ ಮುಂದಾಗಿಯೆ ಆಲೋಚಿಸಿದ್ಧನೆಂದು ಅನುಮಾನವನ್ನು ಹೊರಡಿಸುವುದು ನಿಂದಾದೂಷಿತ ಮತಿಗಳ ಕುತರ್ಕಕ್ಕಲ್ಲದೆ ಇತರರಿಗೆ ಗೋಚರಿಸದು. ನಿಂದಕನೆ! ಮುಂದಾಗಿಯೆ ಬಸವಣ್ಣನು ದುರಾಲೋಚನೆಯನ್ನು ಮಾಡಿದ್ದನೆನ್ನುತ್ತೀಯಲ್ಲ! ಬಿಜ್ಜಳನು ಮಾಡಿದ ಈ ದುಷ್ಕೃತ್ಯಗಳಿಗಾತಿ ಬಸವನೂ ಶರಣರೂ ಮತ್ತೇನು ಮಾಡಬಹುದಾಗಿತ್ತು ?

ಬಸವನು ಬಿಜ್ಜಳನನ್ನು ರಾಜ್ಯಲೋಭಕ್ಕಾಗಿ ಕೊಲ್ಲಿಸಿಲ್ಲ. ಆದುದರಿಂದ ಸ್ವಾಮಿದ್ರೋಹವೇನೂ ಈ ಪ್ರಸಂಗದಲ್ಲಿ ಬಸವನಿಗೆ ಹೊಂದಲಾರದು.

ಬಸವನು ಮಹಿಮಾಶಾಲಿಯಾದರೆ ಬಿಜ್ಜಳನನ್ನು ಶಪಿಸದೆ ಜಗದೇವನಿಗೆ ಬಿಜ್ಜಳನನ್ನು ಶಿಕ್ಷಿಸೆಂದು ಏಕೆ ಆಜ್ಞಾಪಿಸಿದನು! ಎಂಬುದೊಂದು ಬಲು ದುಃಸಾಧ್ಯವಾದಾಕ್ಷೇಪವೆಂದು ನಮ್ಮ ಕಾಶೀನಾಥ ಶಾಸ್ತ್ರಿಯು ಹಮ್ಮಿಕ್ಕಿರುವನು. ಜಗದೇವನು ಅಜ್ಞಾನದಿಂದ ಶಿವಶರಣರನ್ನು ಅನಾದರಿಸಿ ಪ್ರಾಕೃತಬ್ರಾಹ್ಮಣರನ್ನು ಶಿವಭಕ್ತರಿಗಿಂತಲೂ ಅಗ್ರಭೋಜನಾರ್ಹರೆಂದು ಸತ್ಕರಿಸಿದನು. " ಶಿವಭಕ್ತಿಮತಿಕ್ರಮ್ಯ ವಿಪ್ರಸಂಮಾನನಾಪರಃ । ನಾಪ್ನೋತಿಸದ್ಗತಿಂಕಿಂತು ಮಹದೇನಸ್ಕರೋಮತಃ " ಎಂಬ ಅಭಿಯುಕ್ತ ವಚನದಿಂದ ಶಿವಭಕ್ತರನ್ನು ಮೀರಿ ವಿಪ್ರರನ್ನು ಸಂಮಾನಿಸುವನು ಸದ್ಗತಿಯನ್ನು ಹೊಂದುವುದಿಲ್ಲ. ಮತ್ತು ಮಹಾಪಾಪಕಾರಿಯಾಗುವನು. ಜಗದೇವನ ಪಾಪಕ್ಕೆ ಶಿವದ್ರೋಹಿಯನ್ನು ಶಿಕ್ಷಿಸುವುದೆ ಮುಖ್ಯಪರಿಹಾರವಾಗಿತ್ತು. ಈ ಪ್ರಶ್ನದ ಮಾಂದ್ಯವನ್ನು ನೋಡಿರಿ ಪರಮೇಶನು ತ್ರಿಪುರ ಸಂಹರಣಗೆಯ್ದನು. ಕೇವಲ ಲೀಲಾಮಾತ್ರದಿಂದ ಜಗತ್ತಿನ ಸೃಷ್ಟಿಸ್ಥಿತಿ ಪ್ರಲಯಗಳನ್ನು ಪರಮೇಶನು ಮಾಡುವನಲ್ಲವೆ? ಅಂದಬಳಿಕ ತನ್ನ ಸಂಕಲ್ಪದಿಂದಲೆ ತ್ರಿಪುರಗಳನ್ನು

ಸಂಹರಿಸಲಶಕ್ಯವಿತ್ತು. ಹಾಗೆ ಮಾಡದೆ ಈ ನೆಲವನ್ನು ರಥವನ್ನು ಮಾಡಿ ಅದಕ್ಕೆ ಚಂದ್ರ ಸೂರ್ಯರನ್ನು ಗಾಲಿಗಳನ್ನು ಹಾಕಿ ವೇದಗಳೆಂಬ ಅಶ್ವಗಳನ್ನು ಹೂಡಿ, ಬ್ರಹ್ಮನನ್ನು ಸಾರಥಿಯನ್ನಾಗಿಯೂ ವಿಷ್ಣುವನ್ನು ಬಾಣವನ್ನಾಗಿಯೂ ಮೇರುವನ್ನು ಹೆದೆಯನ್ನಾಗಿಯೂ ಮಾಡಿ ತ್ರಿಪುರದವರೊಡನೇಕೆ ಕಾದಿದನು! ಅದರಂತೆಯೆ, ತಾರಕಾಸುರನ ಸಂಹಾರದಲ್ಲಿಯೂ, ಜಲಂಧರ ವಧೆಯಲ್ಲಿಯೂ ಸಂರಂಭ ಪರನೇಕಾದನು? ಬಸವನು ಭಕ್ತಮಾರ್ಗವನ್ನು ತೋರಿಸಲಿಕ್ಕವತರಿಸಿದುದರಿಂದ ಕೇವಲ ಸಂಕಲ್ಪದಿಂದ ಬಿಜ್ಜಳನನ್ನು ದಹಿಸುವ ಸಾಮರ್ಥ್ಯವಿದ್ದರೂಹಾಗೆ ಮಾಡಲಿಲ್ಲ. ಪೂರ್ವದಲ್ಲಿ ವೈದಿಕ ಋಷಿಗಳು ಕೇವಲ ಶಾಪದಿಂದ ತಂವು ರಾಜನ ಶತ್ರುಗಳಾದವರನ್ನು ಪರಾಭವಿಸಲು ಶಕ್ತರಿದ್ದರೂ ಅವರೊಡನೆ ಯುದ್ಧಮಾಡುವ ತಮ್ಮ ರಾಜನಜಯಕ್ಕಾಗಿ ಋಕ್ಕುಗಳಿಂದ ದೇವತಾಪ್ರಾರ್ಥನೆಯನ್ನು ಮಾಡಿರುವರು. ಅದರಿಂದ ಆ ಋಷಿಗಳಲ್ಲಿ ಶಾಪಾನುಗ್ರಹ ಸಾಮರ್ಥ್ಯವಿರಲಿಲ್ಲವೆಂದು ಹೇಳಲಾಗುವುದಿಲ್ಲ. ಋಗ್ವೇದದಲ್ಲಿ ಇಂತಹ ಋಕ್ಕುಗಳು ತುಂಬಿವೆ. "ತ್ವಯಾವಯಂ ಮಘವನ್ನಿಂದ್ರ ಶತ್ರೂನಭಿಷ್ಯಾಮ ಮಹತೋಮನ್ಯಮಾನಾನ್ ತ್ವಂತ್ರಾತಾ ತ್ವಮುನೋವೃಧೇಭೂರ್ವಿದ್ಯಾಮಿಷಂ ವೃಜನಂಜೀರದಾನುಂ ||" ೧ ಮಂಡಲ. ೩೩. ಅಗೂ ೧೪. ಸೂ. ಎಲೈ ಧನವಂತನಾದ ಇಂದ್ರನೇ ತಾವು ಬಲಿಷ್ಠರೆಂದು ತಿಳಿದುಕೊಳ್ಳುವ ಶತ್ರುಗಳನ್ನಾದರು ನಾವು ಜಯಿಸಲಿ. ನೀನು ನಮ್ಮ ರಕ್ಷಕನು. ನೀನು ನಮ್ಮ ಹೆಚ್ಚಳವನ್ನುಂಟುಮಾಡು. ಅನ್ನವನ್ನೂ ಬಲವನ್ನೂ ದೀರ್ಘಜೀವಿತವನ್ನು ನಾವು ಹೊಂದೋಣ. ಆದುದರಿಂದ ಮಹಿಮರುತಪಃಸಾಮರ್ಥ್ಯದಿಂದಾದ ಶಾಪದಿಂದಲೆ ಶತ್ರುಗಳನ್ನು ಪರಿಭವಿಸಬೇಕೆಂಬುದು ನಿಯಮವಲ್ಲ.

ಜಗದೇವನು ವೀರಶೈವ ಶಿರೋಮಣಿಯು. ಶಿವದ್ರೋಹಿಯಾದ ಬಿಜ್ಜಳನನ್ನು ಸಂಹರಿಸುವುದು ಶಿವಶಾಸ್ತ್ರ ಸಮ್ಮತವಾದುದರಿಂದ ಕೊಲೆಗಡಕತನವೆಂದು ಕಾಶೀನಾಥನು ಅಸೂಯಾಪರನಾಗಿ ಜಗದೇವನ ಕೃತಿಗೆ ಹೆಸರಿಟ್ಟ ಮಾತ್ರದಿಂದ ಅದು ಕೊಲೆಗಡಕತನವಾಗಲಾರದು.

ಶಿವಶರಣನಿಂದೆಯ ಫಲವು ಮಾತ್ರ ನಿಂದಕನಿಗಾಯಿತು. ಬಿಜ್ಜಳನು ವ
ಧಾರ್ಹನೆಂಬುವಲ್ಲಿ ಮೇಲೆ ಪ್ರಮಾಣಗಳನ್ನು ದಾಹರಿಸಿರುವೆನು.

ಶ್ರೀಮದಲ್ಲಮ ಪ್ರಭುವಿನ ನಿಂದಾಲೋಲನಾದ ಕಾಶೀನಾಥನು
ಶ್ರೀಪ್ರಭುವಿನ ಕಣ್ಣುಗಳನ್ನು ಬಿಜ್ಜಳನು ಕೀಳಿಸಿದನೆಂದು ಅಭಿಪ್ರಾಯ
ಪಡುವವನಾಗಿ ಕಣ್ಣುಕೀಳಿಸಿಕೊಂಡ ಶರಣನು ಬೇರೆಯುವನೆನ್ನುವುದಾದರೆ
ಪ್ರಮಾಣಗಳನ್ನು ಕೊಡಬೇಕೆಂದು ಆಹ್ವಾನಿಸುತ್ತಾನೆ. ಇವರಿಬ್ಬರು
ಬೇರೆಬೇರೆಯೆ. ಈ ವಿಷಯವನ್ನು ಸಿದ್ಧಪಡಿಸುವ ಮೊದಲು ಒಂದು
ಮಾತನ್ನು ಹೇಳುವುದು ತಕ್ಕುದಾಗಿದೆ. ಈ ವ್ಯಕ್ತಿಗಳು ಬೇರೆಯಾ
ದರು ಕಣ್ಣು ಕೀಳಿಸಿದ ಅಲ್ಲಯ್ಯನೆಂಬ ಶರಣನಿಗೆ ಅದರಿಂದವನತಿಯಾದಿ
ತೆಂದು ತಿಳಿಯಲಾಗದು. ಶರಣರು ಸರ್ವಸ್ವತಂತ್ರರು. ತಂತಮ್ಮ ಚರಿ
ತ್ರದೊಳಗಿನ ಒಂದೊಂದು ಸಂಗತಿಯಿಂದ ಧರ್ಮತತ್ವಗಳ ಜ್ಞಾನವನ್ನು
ನಮ್ಮಲ್ಲಿ ಬೀರಿರುವರು. ಬಿಜ್ಜಳನು ಪಾಪತಮನಾಗಿ ಅಲ್ಲಯ್ಯನ ಕಂ
ಣು ಕೀಳಿಸಿದಲ್ಲಿ ಆ ಶರಣನ ಚಾರಿತ್ರಕ್ಕೆ ಬಂದ ಕುಂದದಾವುದು ? ಮ
ಹಿಮರಾಗಿ ಕಣ್ಣು ಕೀಳಿಸಿಕೊಂಡರೆಂತಲೊ ? ಅಲ್ಲ. ಬಿಜ್ಜಳಾಧಮನ್ನ
ಕಣ್ಣು ಕಿತ್ತರು ಬಸವಾದಿ ಪ್ರಮಥರು ತಮ್ಮ ಪ್ರಭಾವದಿಂದ ಅವರೀ
ರ್ವರ ನೇತ್ರಗಳನ್ನು ಪಡೆದರು. "ಅಲ್ಲಸ್ಯ ಮಧುಪಸ್ಯಾಸ್ಯ ನೇತ್ರಾ
ಣಿ ಸಹಸಾತದಾ । ದದುತ್ತೇ ಸ್ವಪ್ರಭಾವೇಣ ಜ್ಞಾನೇನೈವಾಪಿ ಶಂಕಿ
ತಾಃ ॥" ನೇತ್ರಗಳನ್ನು ತಾವಾಗಿ ಪಡೆದುಕೊಳ್ಳಲು ಸಮರ್ಥರಿದ್ದರೂ
ಬಸವಾದಿ ಮಹಿಮೆಯನ್ನೆ ಲೋಕನಿದರ್ಶನಕ್ಕೆ ತರುವುದು ತಮ್ಮ ಕ
ರ್ತವ್ಯವೆಂದು ಬಸವಾದಿಗಳಿಂದಲೆ ನಯನಗಳನ್ನು ಹೊಂದಿದರು.
ಇಷ್ಟಲಿಂಗವನ್ನು ನಿರೀಕ್ಷಿಸುವ ದೃಷ್ಟಿಯನ್ನು ನೀಗಿ ಅಲ್ಲಯ್ಯ ಮ
ಧುವಯ್ಯಗಳು ಜೀವದಾಶೆಯನ್ನು ಹಿಡಿದಿದ್ದರೆ ಅವರಿಗೊಂದು ಕುಂದಕ
ವಾಗುತ್ತಿದ್ದಿತು. ಇರಲಿ, ಪ್ರಸ್ತುತವನ್ನನುಸರಿಸುವ. ಅನಾದಿ
ಮುಕ್ತರಾದ ಬಸವಾದಿಗಳು ಒಂದೊಂದು ವಿಶೇಷಾರ್ಥ ವಿವರಣಕ್ಕಾಗಿ
ತಮ್ಮ ತಮ್ಮ ಕಾರ್ಯಕ್ಕನುಗುಣವಾದ ಭೂತಕಾಯವನ್ನು ಸ್ವೇಚ್ಛೆ
ಯಿಂದತಾಳಿದ್ದರು .ಅವರಲ್ಲಿ ಅಲ್ಲಮನು ಆಕಾಶಶರೀರನು; ತಸ್ಮಾತ್ ಬಿ
ಜ್ಜಳನು ಅಲ್ಲಮನಕಣ್ಣುಗಳನ್ನು ಕೀಳಸಲಿಕ್ಕೆ ಸಮರ್ಥನಾಗುತ್ತಿರಲಿಲ್ಲ.

ಅಲ್ಲಮನು ವ್ಯೋಮಶರೀರನೆಂಬ " ಅಣಿಮಾದಿಗುಣೋಪೇತೋ ವಿಯನ್ಮಾತ್ರಶರೀರಕಃ " ಬ. ೧೨ ಕ. ಬಸವಪುರಾಣವೆ ಹೇಳುತ್ತಿದೆ. ಪ್ರಭುಲಿಂಗಲೀಲೆಯ ೧೯ ನೆಯ ಅಧ್ಯಾಯದಲ್ಲಿ ಗೋರಕ್ಷನನ್ನು ಅನುಗ್ರಹಿಸುವ ಕಥಾಸಂದರ್ಭದೊಳಗೆ " ಸಂಗೃಹ್ಯತಂ ಸುನಿಶಿತಂ ಕರವಾಲಮುದ್ಯದ್ಧಾರಾವಿಧೂನನಚಣಃ ಕರಲಾಘವೇನ । ಸವ್ಯಾಪಸವ್ಯವಿಧಯಾಶುಬಿಭೇದಮೂರ್ತಿಂ ಸರ್ವತ್ರಚಿತ್ರಗತಿರೇಷ ವಿಭೋರ್ನಭೋವತ್ ॥ ತೇನಾಹತಂಗಗನವತ್ಪ್ರಭುದೇಹಮಾಸೀದೀಷಚ್ಛ್ವತೇರಪಿತದಾವಿಷಯಂಸುರಾಸಂ । ನಿಃಶಬ್ದಮಪ್ರತಿಘಕಾಂತಿ ವಿಕಾರಶೂನ್ಯಂ ದೃಷ್ಟ್ವಾಯಮಪಿ ಸಬಹುಧಾವಿಚಚಾರಭೂಯಃ ॥" ಇತ್ಯಾದಿ।ಗೋರಕ್ಷನು ಬಹಳ ಹದನಾದ ಕತ್ತಿಯನ್ನು ಕೈಯಲ್ಲಿ ತಕೊಂಡು ಹಸ್ತಲಾಘವದಿಂದ ಝಳಪಿಸಿ ನಾನಾಗತಿಗಳಿಂದ ಎಡಕ್ಕೂ ಬಲಕ್ಕೂ ತಿರುತಿರುಗಿ ಪ್ರಭುವನ್ನು ಕಿವಿದನು. ಆ ಶರೀರವು ಆಕಾಶದಂತೆ ಬಯಲಾಗಿತ್ತು. ಸ್ವಲ್ಪವಾದರೂ ಹೊಡತಕ್ಕೆ ವಿಷಯವಾಗಲಿಲ್ಲ. ಕಾಂತಿಯು ಅಚ್ಚಳಿಯಲಿಲ್ಲ. ಹೊಡತದ ಶಬ್ದಗಳಾಗಲಿಲ್ಲ. ಅಣುವಾದರೂ ವಿಕಾರವು ತೋರಲಿಲ್ಲ. ಇದನ್ನೆಲ್ಲ ಕಂಡು ಗೋರಕ್ಷಯೋಗಿಯು ಬಹಳ ವಿಚಾರಪರನಾದನು. ಹಾಗು ಸಿದ್ಧರಾಮನನ್ನು ಅನುಗ್ರಹಿಸುವಲ್ಲಿ " ಜಾಜ್ವಲ್ಯಮಾನೋನಿಟಿಲಾತ್ತದಾಗ್ನಿರ್ನಿರ್ಗತ್ಯ ಗತ್ವಾಲ್ಲಮ ಪಾದಮೂಲಂಸ್ಪ್ರಷ್ಟುಂನಶಕ್ತಃ ಪರಿವೃತ್ಯಸರ್ವಾನ್ ದದಾಹ ತತ್ರತ್ಯಜನಾಂಛಿಖಾಭಿಃ॥" ಸಿದ್ಧರಾಮನು ಕೋಪಾಟೋಪದಿಂದಾದ ನಯನಾಗ್ನಿಯು ಪ್ರಭುಪಾದ ಮೂಲದ ಬಳಿಗೈದಿ ಸುಡಲಾರದೆ ತಿರುಗಿಅಲ್ಲಿ ನೆರೆದಜನರನ್ನೆಲ್ಲ ದಹಿಸಹತ್ತಿತೆಂದು ಹೇಳಿಯದೆ. ಇಂತಹ ಅನೇಕಾನೇಕೋದಾಹರಣಗಳಿಂದಲೂ ಮಾಯಾ ವಿಡಂಬನ ಪ್ರಸ್ತಾವದಲ್ಲಿ " ಗಚ್ಛಾಶುಗೇ ಹಮಿತಿತದ್ವಚನಂ ನಿಶಮ್ಯ ಮಾಯಾಕ್ಷಿಸಂಜ್ಞಿತ ಸಖೀನಿವಹೈಃ ಸಹೈನಂ । ಮೌಢ್ಯಾದಿಯೋಪ್ಯನಿಖಿಲಾತ್ಮಗತಂ ಗೃಹೀತುಂ ಶ್ರೀಮಾನದೃಶ್ಯಪದವೀಂ ಪ್ರಯಯೌ ಸದೇವಃ " ಅಲ್ಲಮನು ಮಾಯೆಯನ್ನು ಕುರಿತು ನಿನ್ನ ವಿಕಾರಗಳಿಗೆ ನಾನು ವಶನಾಗುವನಲ್ಲ, ಸಾಕು; ತೀವ್ರ ಮನೆಗೆ ಹೋಗೆಂದು ಹೇಳಲು ಆಕೆಯು ತನ್ನ ಗೆಳತಿಯರಿಗೆ ಕಣ್ಣು ಸನ್ನೆ ಮಾಡಿ ಅವರೊಡನೆ

ಪ್ರಭುವನ್ನು ಹಿಡಿಯಲು ಯತ್ನಿಸಿದಳು. ಪಾಪ! ಮಾಯೆಯು ಆ ಪ್ರಭುವು ಸರ್ವಗತನೆಂದಾಕೆಯು ಬಲ್ಲಳೆ ? ಅಷ್ಟರಲ್ಲಿ ಆ ಸ್ವಯಂಜ್ಯೋತಿಃಸ್ವರೂಪನು ಅಗೋಚರನಾದನು ಎಂದು ಹೇಳಿರುವುದರಿಂದಲೂ ಪ್ರಭುವು ವ್ಯೋಮಕಾಯನು. ಆದುದರಿಂದ ಆಕಾಶದೇಹನಾದ ಪ್ರಭುವಿನ ಕಣ್ಣುಗಳನ್ನು ಕೀಳಿಸುವುದು ಅಸಂಭವವಿತ್ತು. ಇಂತು ವಸ್ತುರೂಪದಿಂದಲೆ ಬಿಜ್ಜಳನು ಕಣ್ಣು ಕೀಳಿಸಿದ ಅಲ್ಲಯ್ಯನು ಬೇರೆ ಪ್ರಭುವು ಬೇರೆ ಎಂದು ಸಿದ್ಧವಾಗುತ್ತದೆ. ಇದಲ್ಲದೆ ಅವರೀರ್ವರ ಅಭಿಧಾನದಲ್ಲಿಯೂ ವ್ಯತ್ಯಾಸವಿದೆ. ಅಲ್ಲಮನೆಂದು ಒಂದು ಹೆಸರು ಅಲ್ಲಯ್ಯನೆಂದು ಮತ್ತೊಂದು. ಮೊದಲಿನದರಲ್ಲಿ "ಮ" ಕಾರವಿದೆ ಮತ್ತೊಂದರಲ್ಲಿ "ಮ" ಕಾರವಿಲ್ಲ. ಹೀಗೆ ಸ್ಪಷ್ಟ ಭೇದವಿದ್ದರು ಅಸೂಯಾತಮೋಹತವಾದ ಕಾಶೀನಾಥನ ಕಣ್ಣಿಗೆ ಆ ಭೇದವು ತೋರದಿರುವುದು ಸಾಹಜಿಕವು. ಅಲ್ಲಯ್ಯ ಮಧುವಯ್ಯನೆಂಬ ನಾಮಸಾಹಚರ್ಯದಿಂದಲು ಅಲ್ಲಮ ಪ್ರಭುವು ಬೇರೆ ಈ ಶರಣ ಅಲ್ಲಯ್ಯನು ಬೇರೆ ಎಂದು ತಿಳಿಯುತ್ತದೆ. ಅಲ್ಲಮನೊಡನ ಮಧುವಯ್ಯನ ಹೆಸರು ಎಲ್ಲಿಯೂ ಬಂದಿಲ್ಲ. ಅದರಿಂದ ಇವರಿಬ್ಬರು ಬೇರೆ ಬೇರೆಯವರು.

ಈ ಅಲ್ಲಮಪ್ರಭುವೆ ನಿರಂಜನ ಜಂಗಮ ವಸ್ತುವು. ಆತನು ವಿರಕ್ತರಿಗೂ, ಶ್ರೀರೇವಣಾದ್ಯಾಚಾರ್ಯರಿಗೂ, ಬಸವಾದಿ ಭಕ್ತರಿಗೂ ಮೂಲಭೂತನಾದವನು. ಈ ವರೆಗು ನಡೆದು ಬರುತ್ತಿರುವ ವೀರಶೈವ ಸಂಪ್ರದಾಯವೂ, ತಾತ್ವಿಕ ವಿಚಾರದಿಂದುಂಟಾದ ಸಿದ್ಧಾಂತವೂ ಒಂದಕ್ಕೊಂದು ಮೇಳಯಿಸುತ್ತವೆ. ಅದೆಂತೆಂದರೆ, ಸರ್ವಾಂಗದಲ್ಲಿ ಲಿಂಗಸಂಗವಾಗಿ ಬೇರೊಂದರ ಕುರುಹುದೋರದೆ ವಾಯುವಾಕಾಶದಲ್ಲಿ ನಿಂದಂತೆ ಪರದಲ್ಲಿ ಜಂಗಮತತ್ವವು. ಆ ಜಂಗಮತತ್ವದಲ್ಲಿ ಅಡಕವಾದ ಜ್ಞಾನವೆ ಪೂಜ್ಯವಾಗಿ ಪ್ರಕಟಿಸಲು ಲಿಂಗತತ್ವವು. ಆ ಲಿಂಗತತ್ವದ ನೆಲೆಯನ್ನರುಹುವ ಶ್ರುತಿಶಬ್ದವೆ ಗುರುವು. ಈ ಮೂರನ್ನು ತನ್ನಲ್ಲಿ ಅಡಕವಾಗಿಸಿ ಭಕ್ತಿ ಕ್ರಿಯೆಗಳಿಂದವುಗಳಿಗಾಧಾರವಾದ ವಸ್ತುವೆ ಭಕ್ತನು. ಆದುದರಿಂದ ಆದ್ಯಂತಗಳಲ್ಲಿ ಭಕ್ತಜಂಗಮ ತತ್ವಗಳು ಒಂದಕ್ಕೊಂದು ಬೀಜ ಭೂಮಿಗಳಂತಿ[illegible] ಗುರುತತ್ವವು

ಮಧ್ಯಗತ ವೃಕ್ಷವು. ಅದರಲ್ಲಿ ಬೀಜದ ಮತ್ತು ಭೂಮಿಯ ಅಂಗಗಳು ಸಂಮಿಲಿತವಾಗಿವೆ.

ಬಸವನನ್ನಾಶ್ರಯಿಸಿದ ಜಂಗಮರಲ್ಲಿ ಹಲವರು ಮಿಂಡಜಂಗಮರಿದ್ದರು. ಎಲ್ಲರೂ ಮಿಂಡರೂ ಪುಂಡರೂ ಇದ್ದರೆಂಬುದು ಸುಳ್ಳು ನೋಡು:- "ಕರಮುರಃಸ್ಥಳಮಸ್ತಕಂಗಳ ಮಾಸ್ಯಮೊಪ್ಪುವ ಕಕ್ಷೆಯೊಳ್। ಧರಿಸಿಲಿಂಗವನಾಂತು ಭೂತಿಶಿವಾಕ್ಷಮಾಲೆಯನಂಗದೊಳ್ ॥ ಕರಣಧರ್ಮವನೊತ್ತಿ ನಿರ್ಮಳ ವೀರಶೈವಸುಮಾರ್ಗದೊಳ್। ಚರಿಸಿ ರಂಜಿಪರೈದಿದ ವೃಷಭೇಂದ್ರದರ್ಶನ ತತ್ಪರರ್ ॥ ಶಿವಪೂಜಾನಿಷ್ಠರಂಗೇಂದ್ರಿಯಗುಣರಹಿತರ್ ಜಂಗಮಪ್ರೇಮಧಾಮ। ಭವಿಸಂಗತ್ಯಾಗಿಗಳ್ ಭಾಸುರಗುಣನಿಧಿಗಳ್ ಸತ್ಯಸಂಪನ್ನರಾಶಾ। ವಿದೂರರ್ವೀರಶೈವಾಗಮನಿಗಮವಿದರ್ಮಾನಿಗಳ್ಮಾನಿಗಳ್ಶಾಂಭವಭಕ್ತಿಪ್ರಾಂಜುಳರ್ಧರ್ಮಮಹಿತ ಮಹಿಮರೇಳ್ತಂದರಾನಂದದಿಂದಂ ॥ ನೊಸಲ್ ಭಸ್ಮತ್ರಿಪುಂಡ್ರಂ ತೊಳಗೆ ಗಳದೊಳಿಂಬಾಗೆ ರುದ್ರಾಕ್ಷಮಾಲಾ। ವಿಸರಂ ಚೆಲ್ವಾಗೆ ಬಂಬಲ್ಜಡೆ ಮುಡಿಸುಲಿಪಲೋಭೆಯುಂ ಬೀರೆ ದಂಡಂ। ಭಸಿತಾಧಾರಂ ಬಹಿರ್ವಾಸವಮು ಮಮರ್ದೀರ ಲಿಂಗಾಂಗಸಂಯುಕ್ತಯೋಗಿ। ಪ್ರಸರಂ ಬಂದಿರ್ದುದೋರಂತೆಸೆದು ಬಸವ ಸಂದರ್ಶನೋತ್ಕಂಠೆಯಿಂದಂ ॥ ಮುಗ್ಧಸಂಗಯ್ಯ ದಸರಯ್ಯ ಮೊದಲಾದವರ ಚರಿತ್ರಗಳು ಅತ್ಯಂತ ರಮಣೀಯವಾದ ಶಿವಭಕ್ತಿಯನ್ನು ವ್ಯಕ್ತೀಕರಿಸುತ್ತವೆ. ಬಸವನು ಸಾಕ್ಷಾದ್ವೀರಶೈವ ಧರ್ಮವೆರೂಪಗೊಂಡ ಪರವಸ್ತುವು. ಈ ಧರ್ಮಸ್ವರೂಪವನ್ನು ಪರಮಾತ್ಮನು "ಚೋರಾಜಾರಾಸ್ತಥಾ ವೇಶ್ಯಾ ಆ ಚಾಂಡಾಲಾಂತ ಸಂಭವಾಃ। ಮಲ್ಲಿಂಗಧಾರಣಾದೇವ ಮದ್ರೂಪಾಏವತೇಶಿವೇ ॥ ಪಾ. ಪ. ೧. ೫೮. ಎಲೌ ಶಿವೆಯೇ ಕಳ್ಳರು. ಹಾದರಿಗರು. ಸೂಳೆಯರು ಚಂಡಾಲ ಜಾತಿಯೊಡನೆ ಸಕಲಜಾತಿಗಳವರು ನನ್ನ ಲಿಂಗಧಾರಣದಿಂದನನ್ನ ಸ್ವರೂಪಿಗಳಾಗುವರು. ಎಂದಿಂತು ವಿವರಿಸುವನು. ಅಂದರೆ ಶಿವಪ್ರಸಾದವು ಲಭಿಸಿದ ನೀಚಮಾನವರಾದರು ಗತಿಯನ್ನು ಹೊಂದುವರೆಂಬುದು ತಾತ್ಪರ್ಯವು. ಇದರ ಯಥಾರ್ಥತ್ವವನ್ನು ಧರ್ಮಸ್ವರೂಪನಾದ ಬಸವನು ಲೋಕದಲ್ಲಿ ವ್ಯಕ್ತೀಕರಿಸತಕ್ಕುದಿತ್ತು. ಆದುದರಿಂ

ದ ಇಂತಹರಿಗೆ ಬಸವನು ಆಶ್ರಯವನ್ನಿತ್ತನು. ಅವರು ಬಸವನನ್ನಾಶ್ರಯಿಸಿದ ಬಳಿಕ ಪವಿತ್ರ ವರ್ತನದಿಂದ ವರ್ತಿಸಿ ಕೃತಾರ್ಥರಾಗುತ್ತಿದ್ದರು. ವೀರಶೈವಮತದ ಮಹಿಮೆಯನ್ನು ಎಂದರೆ ಅದು ವಿಷಯಾವಿಷ್ಟರನ್ನು ಸುಧಾರಿಸಿ ಮಾರ್ಗಕ್ಕೆ ತರುತ್ತದೆಂಬ ತತ್ವವನ್ನು ಜಗತ್ತಿಗೆ ಮನಗಾಣಿಸಲಿಕ್ಕೆ ಬಸವನು ಇವರಿಗೆ ಆಶ್ರಯವನ್ನಿತ್ತನು. ಪಾಪಿಗಳನ್ನು ಧರ್ಮಕ್ಕೊಲಿಸುವುದು ದೊಡ್ಡವರ ಲಕ್ಷಣವು ಪರಶಿವನು ಪಾಪಿಷ್ಠನಾದ ಶ್ವೇತನಿಗೆ ಗತಿಯನ್ನು ಕೊಟ್ಟನು. ಸುಕುಮಾರನೆಂಬ ಪಾಪಿಯು ಚಂಡಾಲಿನಿಯ ಸಂಸರ್ಗವನ್ನು ಆಕೆಯಲ್ಲಿ ತನಗೆ ಜನಿಸಿದ ಕುಮಾರಿಯ ಸಂಸರ್ಗವನ್ನು ಮಾಡಿದ್ದನಾದರು ಶಿವನು ಆತನನ್ನು ಗಣಪದವಿಗೊಯ್ದನು. ಇಂತಹ ಪಾಪಿಷ್ಠರಿಗೆ ಗತಿಗೊಟ್ಟುದು ತಪ್ಪಾಗದಂತೆ ಬಸವನು ಈ ಜನರನ್ನು ಅನುಕಂಪಿಸಿದುದು ತಪ್ಪಾಗಲರಿಯದು. “ ಪ್ರಸಾದೇಶತ್ರಿಕೀಟೋವಾ ಪತಂಗೋವಾನರೋಥವಾ । ದೇವೋವಾ ದಾನವೋ ವಾಪಿಲಭತೇಜ್ಞಾನಮುತ್ತಮಮ್ ” ಬ್ರಹ್ಮಗೀತಾ ಅಧ್ಯಾಯ ೪-೭೮. ಶಿವಪ್ರಸಾದದಿಂದ ಕೀಟವಾಗಲಿ, ಹಕ್ಕಿಯಾಗಲಿ, ಮನುಜನಾಗಲಿ, ದೇವನಾಗಲಿ, ದಾನವನಾಗಲಿ, ಉತ್ತಮವಾದ ಜ್ಞಾನವನ್ನು ಹೊಂದುವನು. ಎಂದಿಂತನೇಕ ಪ್ರಮಾಣಗಳಿಂದ ಮಹಿಮರು ಜನವನ್ನುದ್ಧರಿಸುವರು. ಶ್ರೀಕೃಷ್ಣನಾದರು ಗೀತೆಯಲ್ಲಿ “ಅಪಿಚೇತ್ಸುದುರಾಚಾರೋ ಭಜತೇ ಮಾಮನನ್ಯಭಾಕ್ । ಸಾಧುರೇವ ಸ ಮಂತವ್ಯಃ ಸಮ್ಯಗ್ವ್ಯವಸಿತೋಹಿಸಃ ॥ ಕ್ಷಿಪ್ರಂ ಭವತಿ ಧರ್ಮಾತ್ಮಾ ಶಶ್ವಚ್ಛಾಂತಿಂ ನಿಗಚ್ಛತಿ ॥ ಕೌಂತೇಯ ಪ್ರತಿಜಾನೀಹಿನಮೇ ಭಕ್ತಃ ಪ್ರಣಶ್ಯತಿ ” ೯, ಅಧ್ಯಾಯ ೩೦-೩೧. ಬಹುಳ ದುರಾಚಾರಿಯಾದರೇನು ನನ್ನನ್ನು ಒಂದೆ ಮನಸಿನಿಂದ ಭಜಿಸಿದನಾದರೆ ಸಾಧುವೆಂದೇ ತಿಳಿಯಬೇಕು. ಆತನು ಚನ್ನಾಗಿ ವ್ಯವಸಾಯವನ್ನು ಮಾಡಿರುವನು. ತೀವ್ರದಲ್ಲಿಯೆ ಧರ್ಮಾತ್ಮನಾಗುವನು. ಮತ್ತು ನಿತ್ಯವಾದ ಶಾಂತಿಯನ್ನು ಹೊಂದುವನು. ಎಲೈ ಕುಂತೀಪುತ್ರನೆ ನನ್ನ ಭಕ್ತನು ನಾಶವನ್ನು ಹೊಂದತಕ್ಕವನಲ್ಲೆಂದು ಗಟ್ಟಿಯಾಗಿ ತಿಳಿ ಎಂದು ಹೇಳಿರುವನು. ಶ್ರೀಬಸವನ [illegible] ದಿಂದ ಶಿವನು

ಪೂಜೆಯನ್ನು ಸ್ವೀಕರಿಸುವುದಿಲ್ಲೆಂದು ಸ್ಪಷ್ಟವಾಗಿ ಹೇಳಿರುವುದರಿಂದ ಬಸವನು ಇಂತಹರನ್ನು ಸುಧಾರಿಸುತ್ತಿದ್ದನೆಂಬುದೇ ಸಿದ್ಧಾಂತವು. ಇದೇ ಬಸವನ ಉದ್ದೇಶವಲ್ಲದೆ ಬೇರೆ ಉದ್ದೇಶವಿರಲಿಲ್ಲವು.

ಸುಜನಾಸಾಬ್ಜವನಂ ಪೊದಳ್ದಲರೆ ಮೋಹೇಂದೀವರಂ ಕುಂಚಿಕೆ । ತ್ತುಜದಪಾಂಥತಮುಂಕರಂ ಪರಿಯೆ ದುರ್ದಾಂತೋಡುಗಳ್ಕಂದೆ ಭ । ಕ್ತಜನಸ್ವಾಂತವಿಲೋಚನಕ್ಕೆ ವಿಷಯಂ ಸರ್ವಾರ್ಥಮಪ್ಪಂತೆ ಮಾ । ಡಿ ಜಗದ್ವಂದ್ಯವೃಷಾರ್ಕನಭ್ಯುದಯಮಂ ಕೈಕೊಂಡು ಕಣ್ಗೊಪ್ಪಿದಂ ॥ ಎಂದಿಂತಾಗಿ ಶ್ರೀಷಡಕ್ಷರನೂ ಉಳಿದ ವರಾದ ಎಲ್ಲ ಬಸವ ಚರಿತ ಕವಿಗಳೂ ವರ್ಣಿಸಿರುವರು. ಶ್ರೀ ಬಸವನೆಂಬ ಸೂರ್ಯನುದಯದಿಂದ ಸುಜನರ ಮುಖಗಳೆಂಬ ಕಮಲವನವು ವಿಕಾಸಂದಾಳಿತು, ಜನರ ಮೋಹವೆಂಬ ಕುಮುದವು ಕುಂದಿತು, ಕಾಮನದರ್ಪವೆಂಬ ಕಗ್ಗತ್ತಲೆಯು ನಿಃಶೇಷವಾಗಿ ಹರಿಯಿತು. ದುರ್ದಾಂತರೆಂಬ ತಾರೆಗಳು ನಿಷ್ಪ್ರಭವಾದುವು, ಭಕ್ತಜನದ ಲೋಚನಂಗಳು ಸರ್ವಾರ್ಥಗಳನ್ನು (ಶಿವಶಾಸ್ತ್ರಗಳನ್ನು) ಸಾಕ್ಷಾತ್ಕರಿಸಲು ಸಮರ್ಥವಾದುವು. ಎಂದು ಬಣ್ಣಿಸಿರುವುದರಿಂದ ಆತನನ್ನು ಸಾರಿದ ಮಿಂಡಜಂಗಮರ ಕಾಮವಿಕಾರವು ಕುಗ್ಗಿದುದೆಂದು ತಿಳಿಯುತ್ತದೆ.

ಶ್ರೀಬಸವನಿಗೆ ಜಂಗಮರು ಸೈನಿಕರೆಂದು ಫ್ಲೀಟನು ಬರೆಯುವುದನ್ನಾಶ್ರಯಿಸಿ ಕಾಶೀನಾಥನು ಪುಂಡಮಿಂಡಜಂಗಮರು ಬಸವನ ಸೈನಿಕರೆಂದು ವಾದಿಸುವನು. ಇದು ಸರಿಯಲ್ಲ. ಪುಂಡರೂ ಮಿಂಡರೂ ಸೈನಿಕರಾಗಿ ಆವ ರಾಜ್ಯವನ್ನು ಸ್ಥಾಪಿಸಲು ಸಮರ್ಥರಾದ ಉದಾಹರಣೆಗಳಿಲ್ಲ. ಸೈನಿಕರಲ್ಲಿ ಸ್ವಾಮಿಭಕ್ತಿ ಆತ್ಮಸಂಯಮ ಇತ್ಯಾದಿ ಗುಣಗಳಿಲ್ಲದೆ ರಾಜ್ಯಸ್ಥಾಪನೆಯಾಗಲಾರದು. ಶಿವಾಜಿ ಮಹಾರಾಜನ ಮಾವಳೆ ಬಂಟರು, ರಜಪುತ ಅರಸರ ದಂಡಾಳುಗಳು ಇಂತಹರೆಲ್ಲರು ಸ್ವಾಮಿಭಕ್ತಿ ದೇಶಭಕ್ತಿಗಳಿಂದ ಪೂರಿತರಿದ್ದರು. ಬಸವನು ಈತೆರನಾದ ಸಾಮಾನ್ಯ ವಿಷಯವನ್ನು ತಿಳಿಯದ ಹೆಡ್ಡನಿದ್ದಿಲ್ಲ. ಆದುದರಿಂದ ರಾಜ್ಯವನ್ನು ಕೈವಶಮಾಡಿಕೊಳ್ಳುವ ಅಭಿಪ್ರಾಯವನ್ನುಳ್ಳವನಿದ್ದರೆ ಪುಂಡಮಿಂಡರನ್ನೆಂದೂ ಸಲಹುತ್ತಿದ್ದಿಲ್ಲ. ಶ್ರೀಬಸವನಿಗೆ ರಾಜ್ಯದಲ್ಲಿ

ಅಭಿಲಾಷವಿದ್ದಿಲ್ಲವೆಂಬುವುದಕ್ಕೆ ಆತನ ವಚನಗಳು ಸಾಕ್ಷಿಯಾಗಿವೆ. "ಪರಿವಹಾವಿಂಗಂಜೆ ಉರಿವ ಅನಲಂಗಂಜೆ. ಸುರಗಿಯ ಮೊನೆಗಂಜೆ, ಒಂದಕ್ಕಂಜುವೆನೊಂದಕ್ಕಳಕುವೆ. ಪರಸ್ತ್ರೀಪರಧನವೆಂಬ ಭುಜಂಗಂಗಂಜುವೆ. ಮುನ್ನಂಜದ ರಾವಣನೆ ವಿಧಿಗೊಳಗಾದ." ಈ ವಚನದಿಂದ ಪರಧನ ಪರಸತಿಯರು ಕಚ್ಚುವ ಹಾವಿಗಿಂತಲೂ, ಸುಡುವ ಬೆಂಕಿಗಿಂತಲೂ ಭಯ ಪ್ರದವೆಂದು ಬಸವನುಪದೇಶವು ಸ್ಪಷ್ಟವಾಗಿದೆ.

ಶ್ರೀಬಸವೇಶನು ನೀಚ ಜಾತಿಯವರಿಗಾರಿಗೂ ಲಿಂಗಧಾರಣ ಮಾಡಿಲ್ಲ. ಅದೇಕೆ! ಅವನಾರಿಗೂ ಲಿಂಗಧಾರಣಂ ಗೈದಿಲ್ಲ. ಆ ಮಂತ್ರ ಮೂರ್ತಿಯು ತನ್ನ ನಡೆಯಿಂದ ಭಕ್ತಿಯನ್ನು ಪಸರಿಸಲವತರಿಸಿದನು. ಗುರುಲಿಂಗ ಜಂಗಮದಲ್ಲಿ ದಾಸೋಹಿಯಾಗಿರ್ದನು. ಈ ವಿಷಯದಲ್ಲಾತನ ವಚನವು:— ಓಹೊ ನಾನೊಬ್ಬರಿಗೆ ಉಪದೇಶವ ಮಾಡಲಮ್ಮೆನು ಮುನ್ನಲಾದವರು ತಮ್ಮಿಂದ ತಾವಾದರು, ಅವರೆಲ್ಲರು ನಿಜಲಿಂಗೈಕ್ಯರು, ನಾನೇನು ಮಾಡಲಿಲ್ಲ. ತತ್ವವ ಹಿಡಿದಗ್ಗಲೆ ತೊತ್ತಾಗಿ ನಡೆಯುವೆನು. ಅಮರಗಣಂಗಳ ಸಾಕ್ಷಿ. ಕೂಡಲ ಸಂಗಮದೇವರ ಭಾಷೆ. ಪ್ರಸಾದವ ಕೊಳ್ಳಲಮ್ಮೆನಯ್ಯ ಚನ್ನಬಸವಣ್ಣ ಶೂನ್ಯಸಂಪಾದನೆಯ ಚತುರ್ಥ ಸಂಪಾದನೆಯಲ್ಲಿ ೨. ಇದಿರಲಿ ಜಾತಿಯನ್ನು ವಿಚಾರಿಸುವ. ಮತ್ತು ಶಿವ ದೀಕ್ಷೆಯಿಂದ ಜಾತಿಯಳಿಯುವುದನ್ನು ಮತ್ತೊಮ್ಮೆ ಉಪಪಾದಿಸುವ ವ್ಯಕ್ತಿಯೊಬ್ಬ ಜೀವನ ಪೂರ್ವ ಸಂಸ್ಕಾರಗಳಿಂದಲೂ ವಾಸನೆಯಿಂದಲೂ, ಅವನ ಶರೀರದಲ್ಲಿಯೂ ಅಂತಃಕರಣದಲ್ಲಿಯು ಒಂದುತರದ ಯೋಗ್ಯತೆಯು ಉಂಟಾಗುತ್ತದೆ ಇದೇ ಜಾತಿಯು. ವಿಶಿಷ್ಟ ಮಾತಾಪಿತೃರೀ ಯೋಜನ್ಯ ಶರೀರವುಳ್ಳಾತನಾದುದರಿಂದ ವಿಶಿಷ್ಟವರ್ಣದವನೆಂಬುದು ಖಚಿತವು. ಹೇಗೆಂದರೆ:—" ಶಮೋದಮಸ್ತಪಃ ಶೌಚಂ ಕ್ಷಾಂತಿರಾರ್ಜವಮೇವಚ । ಜ್ಞಾನಂ ವಿಜ್ಞಾನಮಾಸ್ತಿಕ್ಯಂ ಬ್ರಹ್ಮಕರ್ಮಸ್ವಭಾವಜಂ ॥ ಶೌರ್ಯಂ ತೇಜೋಧೃತಿರ್ದಾಕ್ಷ್ಯಂ ಯುದ್ಧೇಚಾಪ್ಯಪಲಾಯನಂ । ದಾನಮೀಶ್ವರಭಾವಶ್ಚ ಕ್ಷತ್ರಕರ್ಮಸ್ವಭಾವಜಂ ॥ ಕೃಷಿಗೌರಕ್ಷ್ಯವಾಣಿಜ್ಯಂ ವೈಶ್ಯಕರ್ಮಸ್ವಭಾವಜಂ । ಪರಿಚರ್ಯಾತ್ಮಕಂಕರ್ಮ ಶೂದ್ರಸ್ಯಾಪಿ ಸ್ವಭಾವಜಂ॥" ಭ. ಗೀ. ಅ. ೧೮ ಶ್ಲೋ. ೪೨-೪೪. ಎಂಬೀ

ಮೊದಲಾದ ಪ್ರಮಾಣಗಳಿಂದ ಶಮದಮ ಶೌಚತಪಸ್ಸು ಮುಂತಾದವು ಗಳು ಬ್ರಾಹ್ಮಣನ ಸ್ವಭಾವವಾಗಿವೆ. ಶೌರ್ಯತೇಜ ಆದಿಗಳು ಕ್ಷತ್ರಿಯನ ಸ್ವಭಾವವಾಗಿವೆ. ಕೃಷಿಗೋರಕ್ಷಣಗಳು ವೈಶ್ಯನಿಗೂ ಪರಿಚರ್ಯೆಯು ಶೂದ್ರನಿಗೂ ಲಕ್ಷಣವಾಗಿವೆ. ಆದುದರಿಂದ "ಸಾಸ್ನಾದಿಮತೀಗೌ;" ಗಂಗೆದೊಗಲು ಮುಂತಾದ ಗುರುತುಗಳುಳ್ಳದು ಆಕಳು ಎಂಬ ಲಕ್ಷಣವು ಆವ ವ್ಯಕ್ತಿಯಲ್ಲಿ ಅನ್ವಯಿಸುವುದೋ? ಅದನ್ನು ಆಕಳೆನ್ನುವಂತೆ ಈ ಲಕ್ಷಣಗಳನ್ವಯಿಸುವರೆ ಬ್ರಾಹ್ಮಣಾದಿಗಳಲ್ಲದೆ, ಇತರರು ಬ್ರಾಹ್ಮಣಾದಿಗಳಾಗಲಾರರು. ಆದುದರಿಂದ ಈ ಲಕ್ಷಣಗಳ ಅನ್ವಯವಾಗದೆ ಬ್ರಾಹ್ಮಣಾದಿ ವರ್ಗೀಕರಣವು ಕೃತ್ರಿಮವು, ಚಕ್ಷುಪಾತ ಮೂಲವು.

ಜನ್ಮದಿಂದ ವರ್ಣಗಳನ್ನು ಕಲ್ಪಿಸುವವರು ಪರಮಾತ್ಮನು ಸುಳ್ಳರಲ್ಲಿ ಸುಳ್ಳನೆಂದು ಸಾಧಿಸುವ ದೋಷಕ್ಕೆ ಪಾತ್ರರಾಗುವರು. ಲೋಕದಲ್ಲಿ ಹಿಟ್ಟಿಗೆ ಸಕ್ಕರೆಯೆಂದಾಗಲಿ, ಸುಣ್ಣದ ನೀರಿಗೆ ಹಾಲೆಂದಾಗಲಿ ನಂಬಿಸಲು ಪ್ರಯತ್ನಪಡುವನಿಗೇನೆನ್ನುವರು ? ಮೋಸಗಾರನೆಂತಲ್ಲವೆ? ಅದರಂತೆಯೆ ನಮ್ಮ ಅನುಭವದಿಂದ ಅತಿ ನೀಚನೆಂದು ಸಿದ್ಧವಾಗುವ ಒಂದಾನೊಂದು ವ್ಯಕ್ತಿಗೆ ದೇವರು ಈತನನ್ನು ಉಚ್ಚನೆಂದು ಹೇಳಿರುವನೆಂದು ನಂಬುವುದು ಪರಮಾತ್ಮನಲ್ಲಿ ಅಜ್ಞಾನವನ್ನಾಗಲಿ ವಂಚನವನ್ನಾಗಲಿ ಒಡಂಬಡದೆ ಆಗಲಾರದು. ಸೃಷ್ಟಿಯನ್ನೆಲ್ಲ ಪರಮಾತ್ಮನು ನಿರ್ಮಿಸಿರುವನು. ಅದರಲ್ಲಿ ಪರಮಾತ್ಮನ ನಿಯಮವು ಒಂದೆ ರೀತಿಯಾಗಿದೆ ಅಂದರೆ ಕೆಟ್ಟದ್ದು ಕೆಟ್ಟದೆ ಚಲುವನ್ನದು ಚಲುವನ್ನದೆ ಮುಳ್ಳು ಮುಳ್ಳೆ, ಕಬ್ಬು ಕಬ್ಬೆ. ಆದರೆ ಸ್ವಾರ್ಥಪರರಾದ ಧೂರ್ತರು ಮಾತ್ರ ಮನುಷ್ಯ ಸೃಷ್ಟಿಗೆ ವಿಪರೀತವಾದ ನಿಯಮಗಳನ್ನು ಕಲ್ಪಿಸಿ ನೀಚನನ್ನು ಉತ್ತಮನೆಂದೂ ಉತ್ತಮನನ್ನು ನೀಚನೆಂದೂ ಪರಮೇಶ್ವರನು ಕಲ್ಪಿಸಿರುವನೆಂತಲೂ, ಉತ್ತಮನಲ್ಲಿ ರತಕ್ಕ ಗುಣಗಳಿಲ್ಲದಿದ್ದರು ಜಾತಿಯಿಂದ ಉತ್ತಮನೆನಿಸುವನು, ಉತ್ತಮ ಗುಣಗಳುಳ್ಳವನಾಗಿ ಜಾತಿಯಲ್ಲಿ ನೀಚನಾದವನಿಗೆ ಮೇಲ್ತರದವನೆಂದು ಹೇಳಲೇ

ಶ್ವರ ಸಂಕೇತವಿರುತ್ತದೆಂದೂ ಸಾಧಿಸುವರು. ಋಷಿಗಳೆನಿಸುವರೆಲ್ಲರು ತಮ್ಮ ತಮ್ಮ ಗುಣಗಳಿಂದಲೆ ಉಚ್ಚರಾದರು.

ಇರಲಿ, ಪ್ರಾಕೃತರ ಅರ್ಥಾತ್ ಪ್ರಕೃತಿ ಯಿಂದ ಹುಟ್ಟಿದ ದೇಹಾದಿಗಳಲ್ಲಿ ತಾನೆಂಬ ಅಥವಾ ತನ್ನದೆಂಬ ಮತಿಯುಳ್ಳವರ ಮಾತಿದು. ಗುರುದೀಕ್ಷೆಯನ್ನು ಹೊಂದಿ ತನುವಿಗೆ ಇಷ್ಟಲಿಂಗಧಾರಣವಾಗಲು ಸ್ವಕೀಯವಾದ ಅಂದರೆ ಗುಣಕರ್ಮಗಳಿಂದ ಬಂದುದಾದ ಜಾತಿಯು ಸಹ ಇಲ್ಲವಾಗುತ್ತದೆ. ಹೇಗೆಂದರೆ—ಜಾತಿ ಎಂಬುದು ಕರ್ಮಪಾಶದ ಕಾರ್ಯವು. "ಧರ್ಮಾಧರ್ಮಾತ್ಮಕಂ ಕರ್ಮ ತಚ್ಚ ತ್ರಿವಿಧಮರ್ಥತಃ। ಜಾತ್ಯಾಯುರ್ಭೋಗದಂ ಯೇನ ವಾಮಿಶ್ರಂ ಪಚ್ಯತೇ ಕ್ವಚಿತ್॥" ಕರ್ಮವು ಧರ್ಮವೆಂದೂ ಅಧರ್ಮವೆಂದೂ ಎರಡು ತೆರನಾದುದು. ಕರ್ಮದ ಪ್ರಯೋಜನವು ತ್ರಿವಿಧವಾಗಿದೆ. ೧. ಜಾತಿಯನ್ನುಂಟು ಮಾಡುವುದು; ೨. ಆಯುಷ್ಯವನ್ನೀಯುವುದು; ೩. ಭೋಗವನ್ನುಂಟು ಮಾಡುವುದು. ಈ ಮೂರರಲ್ಲಿ ಒಂದೊಂದು ಕಾರ್ಯವನ್ನುಂಟು ಮಾಡುವ ಒಂದೊಂದೆ ಕರ್ಮವು ಒಂದೊಂದೆ ಪಕ್ವವಾಗುವುದಿಲ್ಲ. ಮೂರೆರನಾದ ಕರ್ಮಗಳೂ ಕೂಡಿ ಫಲವನ್ನು ಕೊಡುತ್ತವೆ. ದೀಕ್ಷೆಯಿಂದ ಜಾತಿಯು ಅಳಿಯುವ ಪ್ರಕಾರವು. ಲಿಂಗಸಂಗಿಯು ನಿತ್ಯದಲ್ಲಿಯೂ ಲಿಂಗಧ್ಯಾನ ಪರಾಯಣನಾಗಿ ತಾನು ಮಾಡತಕ್ಕ ಕೆಲಸಗಳನ್ನೆಲ್ಲ ಗುರುಲಿಂಗಜಂಗಮಕ್ಕಾಗಿಯೆ ಮಾಡುತಿರುವನು. ತನಗಾಗಿಯು ತನ್ನ ಸತಿಸುತರಿಗಾಗಿಯು ಆವದೊಂದು ಕರ್ಮವನ್ನಾದರು ಮಾಡನು. ತನ್ನ ಕಾಯಕದಲ್ಲಿ ಲಬ್ಧವಾದುದನ್ನು ಗುರುಲಿಂಗಜಂಗಮಾರ್ಪಿತವನ್ನಾಗಿಸಿ ಶೇಷವನ್ನು ಶಿವಪ್ರಸಾದವೆಂದು ಸ್ವೀಕರಿಸುವನು. ಇದರಿಂದ ಕರ್ಮಭೋಗವು ದೂರಾಗುವುದು. ಆತ್ಮಭೋಗಕ್ಕಾಗಿ ಮಾಡುವ ಕರ್ಮದಲ್ಲಿಯೆ ಜಾತಿಪ್ರದವಾದ ಕರ್ಮದ ಮೇಳವಿರುತ್ತದೆ. ಹೇಗೆಂದರೆ ಬ್ರಾಹ್ಮಣನು ಯಾಜನಾದಿಗಳಿಂದ ದೊರೆತ ಹಣದಲ್ಲಿ ತನ್ನ ವೃತ್ತಿಯನ್ನು ನಡೆಯಿಸುವನು. ಕ್ಷತ್ರಿಯ ವೈಶ್ಯರಲ್ಲಿ ಪುರೋಹಿತನಾಗಿ ಅವರಿಂದ ವೈದಿಕ ಕರ್ಮಗಳನ್ನು ಮಾಡಿಸಿ ಅದರ ಪ್ರತಿಫಲಕ್ಕಾಗಿ ಅವರು ಕೊಟ್ಟ ದಕ್ಷಿಣೆಯಿಂದ ತನ್ನ ಉದರಭರಣವನ್ನು

ಮಾಡುವನು. ಬ್ರಾಹ್ಮಣನಿಗೆ ಕೊಡುವ ದಕ್ಷಿಣೆಯು ಆತನ ವೃತ್ತಿಯು ಅಥವಾ ಸಂಬಳವೆನ್ನುವಲ್ಲಿ "ಸ್ವಾಮಿಕರ್ಮ ಪರಿಕ್ರಯಃ ಕರ್ಮಣಸ್ತದರ್ಥತ್ವಾತ್" ೩—೪—೭—೧. "ದಕ್ಷಿಣಾ ಪರಿಕ್ರೀತಾ ಋತ್ವಿಜೋಯಜಾ ಜಯೇಯುಃ" "ಪರಿಕ್ರೀತ ವಚನಾಚ್ಚ" ೧೦—೨—೪—೨೬. ಇತ್ಯಾದಿ ಶ್ರುತಿ ಸೂತ್ರಗಳು ಪ್ರಮಾಣವಾಗಿವೆ. ಇದರಂತೆಯೆ ಕ್ಷತ್ರಿಯಾದಿವರ್ಣಧರ್ಮಗಳಾದರು ಇರುವುವು. ಆದುದರಿಂದ ಲಿಂಗಾಂಗ ಸಾಮರಸ್ಯಕ್ಕಾಗಿ ಶಿವಕ್ರಿಯಾಪರನಾದ ವೀರಶೈವನಲ್ಲಿ ಜೀವಾತ್ಮಪರವಾದ ಕರ್ಮವಿಲ್ಲದರಿಂದ ವರ್ಣಧರ್ಮವಿಲ್ಲವು. ಬ್ರಾಹ್ಮಣಾದಿ ವರ್ಣಧರ್ಮಗಳು ವೃತ್ತಿ ಅಥವಾ ಜೀವನೋಪಾಯಭೂತಗಳೆನ್ನುವುದು ಸ್ಮೃತಿಗಳಿಂದಾದರು ಕಂಡು ಬರುತ್ತದೆ. "ಅಜೀವಂಸ್ತು ಯಥೋಕ್ತೇನ ಬ್ರಾಹ್ಮಣಃ ಸ್ವೇನಕರ್ಮಣಾ । ಜೀವೇತ್ ಕ್ಷತ್ರಿಯಧರ್ಮೇಣ ಸಹ್ಯಸ್ಯ ಪ್ರತ್ಯನಂತರಃ ॥ ಉಭಾಭ್ಯಾಮಪ್ಯಜೀವಂಸ್ತು ಕಥಂ ಸ್ಯಾದಿತಿಚೇದ್ಭವೇತ್ । ಕೃಷಿಗೋರಕ್ಷಮಾಸ್ಥಾಯ ಜೀವೇದ್ವೈಶ್ಯಸ್ಯ ಜೀವಿಕಾಮ್ ॥" ಮನುಸ್ಮೃತಿ ಅಧ್ಯಾಯ ೧೦; ೮೧-೮೨. ಬ್ರಾಹ್ಮಣನು ಸ್ವಜಾತಿ ವಿಹಿತ ಕರ್ಮದಿಂದ ಜೀವಿಸಲಾರನಾದರೆ ತನಗೆ ಸಮೀಪತರವಾದ ಕ್ಷತ್ರವೃತ್ತಿಯಿಂದ ಬದುಕಬೇಕು. ಇವೆರಡರಿಂದಲು ಜೀವನವು ಸಾಗದಿದ್ದರೆ—ಹೇಗೆಂದರೆ ಒಕ್ಕಲತನದಿಂದಲು ಗೋಪಾಲನದಿಂದಲು ವೈಶ್ಯವೃತ್ತಿಯಿಂದ ಬಾಳಬೇಕು.

ವೀರಶೈವನು ಅನ್ಯರಿಗಾಗಿ ಪೂಜಾಯಜ್ಞಾದಿಗಳನ್ನು ಮಾಡಬಾರದಾದುದರಿಂದ ಬ್ರಾಹ್ಮಣ ವೃತ್ತಿಯು ಘಟಿಸಲಾರದು. ಪ್ರಜಾರಕ್ಷಣವನ್ನಾದರು ಪರಮೇಶ್ವರ ನಿರ್ಮಿತ ಜಗತ್ತಿನಲ್ಲಿ ಪ್ರಬಲರಿಂದ ದುರ್ಬಲರಿಗೆ ಬಾಧೆಯಾಗಗೊಡಬಾರದೆಂಬ ಬುದ್ಧಿಯಿಂದಲು ಆ ಕಾರ್ಯದಿಂದ ತನಗೊದಗಿದ ಸಂಪತ್ತಿನಲ್ಲಿ ಹರಗುರುಚರಸೇವೆಯಾಗಬೇಕೆಂಬ ಬುದ್ಧಿಯಿಂದಲು ಮಾಡಬೇಕಾದುದರಿಂದ ಕ್ಷತ್ರವೃತ್ತಿಯೂ ಘಟಿಸದು. ಅದರಂತೆಯೆ ವ್ಯವಹಾರ ಮತ್ತು ಒಕ್ಕಲತನಗಳು ವೀರಶೈವನಿಗೆ ವರ್ಣಧರ್ಮಗಳಾಗುವುದಿಲ್ಲ. ಅವು ಹರಗುರುಚರಾರ್ಥವಾಗಿಯೆ ಇರುತ್ತವೆ.

ವರ್ಣಧರ್ಮಗಳಿಗೂ ವೀರಶೈವನ ಕಾಯಕಗಳಿಗೂ ಇರುವ ಮುಖ್ಯ
ಭೇದವೆಂದರೆ ವರ್ಣಧರ್ಮಗಳು ಜೀವಾತ್ಮನಲ್ಲಿರುವ ಅಹಂಭಾವದಿಂದ
ತೋರಿದ ದೇಹಾದಿಗಳಿಗಾಗಿ ಮಾಡಲ್ಪಡುವವು. ಲಿಂಗವಂತನಲ್ಲಿ
ತನ್ನ ಬುದ್ಧಿಬಲಗಳಿಗನುಸರಿಸಿ ಸರ್ವಕರ್ಮಗಳೂ ಶಿವಾರ್ಥವಾಗಿ
ಮಾಡಲ್ಪಡುವುವು. ಆದುದರಿಂದ ವೀರಶೈವನು ಅತಿವರ್ಣಿಯೆಂದರೆ
ವರ್ಣಗಳನ್ನೆಲ್ಲ ಮೀರಿದವನು ಎನಿಸುವನು.

ಈ ವರೆಗೆ ನಾನು ಮಾಡಿದ ವಿಚಾರಸಿದ್ಧಾಂತಕ್ಕೆ ಆಗಮ ವಚನ
ಗಳ ಪ್ರಮಾಣವಾದರು ದೊರೆಯುತ್ತದೆ. "ನ ಬ್ರಹ್ಮವೃತ್ತ್ಯಾ ನ
ಕ್ಷತ್ರವೃತ್ತ್ಯಾ ನೋ ವೈಶ್ಯವೃತ್ತಿತಃ ನ ಶೂದ್ರವೃತ್ತ್ಯಾ ಜೀವೇತ
ಯದಿ ಲಿಂಗೀಹಠೇ ಸುಖಮ್ ॥" ಪಾ. ೭, ಪ. ೫೮. ಲಿಂಗಧಾರಿಯು
ಅಂಗಲಿಂಗಸಾಮರಸ್ಯವೆಂಬ ಸುಖವನ್ನು ಬಯಸುವನಾದರೆ ಬ್ರಾಹ್ಮ
ಣಾದಿ ಚಾತುರ್ವರ್ಣ್ಯ ವೃತ್ತಿಯಿಂದ ಜೀವಿಸಲಾಗದು ಎಂಬ ಪಾರಮೇ
ಶ್ವರ ವಾಕ್ಯವು ಲಿಂಗಾಯತರಲ್ಲಿ ಈ ನಾಲ್ಕು ವರ್ಣಗಳಿಲ್ಲೆಂದು
ವ್ಯಕ್ತಗೊಳಿಸುತ್ತದೆ.

ಆದುದರಿಂದ ಶ್ರೀಗುರುವನ್ನು ಶರಣುಹೊಕ್ಕು ಲಿಂಗಧಾರಣವನ್ನು
ಹೊಂದಬೇಕೆಂಬ ಲಾಲಸೆಯುಳ್ಳಾತನು. ನೀಚ ಜಾತಿಯವನಿರಲಾರನು.
ಆವನ ತಂದೆತಾಯಿಗಳಿಂದ ಲೌಕಿಕರ ದೃಷ್ಟಿಗೆ ತೋರುವ ಜಾತಿಯು
ಅವನದಾಗದು. ಅನಿತ್ಯವಾದ ಹುಸಿಯಾದ ಸಂಸಾರದಲ್ಲಿ ವಿರತಿಭಾವ
ವನ್ನು ಹೊಂದಿದವನಾದುದರಿಂದಲೂ ಶಿವಪದಾರವಿಂದದಲ್ಲಿ ಭಕ್ತಿಯ
ನ್ನು ತಾಳಿದವನಾದುದರಿಂದಲೂ ಆತನು ಉತ್ತಮ ಜಾತಿಯವನೆ. ಅ
ರ್ಥಾತ್ ಕೃತ್ರಿಮವಾದ ವರ್ಣಬ್ರಾಹ್ಮಣ್ಯವಿರಲಿ ಇಲ್ಲದಿರಲಿ. ಶೈವ
ಶಾಸ್ತ್ರಗಳಲ್ಲಿ ಶಿವಧರ್ಮಾಧಿಕಾರಿಯೆಂದು ವಿಧಿಸಿದ ಸಹಜ ಬ್ರಾಹ್ಮಣ
ನು "ಮದ್ಭಕ್ತಜನವಾತ್ಸಲ್ಯಂ ಪೂಜಾಯಾಂಚಾನು ಮೋದನಮ್। ಸ್ವ
ಯ ಮಭ್ಯರ್ಚನಂ ಭಕ್ತ್ಯಾ ಮದರ್ಥೇ ಚಾಂಗಚೇಷ್ಟಿತಮ್ ॥ ಮತ್ಕ
ಥಾಶ್ರವಣೇ ಭಕ್ತಿಃ ಸ್ವರನೇತ್ರಾಂಗ ವಿಕ್ರಿಯಾ ॥ ಮಮಾನುಸ್ಮರಣಂ
ನಿತ್ಯಂ ಯಚ್ಚ ಮಾಂ ನೋಪಜೀವತಿ । ಭಕ್ತಿರಷ್ಟವಿಧಾ ಹ್ಯೇಷಾ ಯ

ಸ್ಮಿನ್ಮ್ಲೇಚ್ಛೇಪಿ ದೃಶ್ಯತೇ । ಸವಿಪ್ರೇಂದ್ರೋಮುನಿಃ ಶ್ರೀಮಾನ್ಸಯತಿಃ ಸಚ ಪಂಡಿತಃ ॥" ಸೌರಪುರಾಣ ೧೧, ಅಧ್ಯಾಯ ೧೬-೧೮. ಶಿವಭಕ್ತರಲ್ಲಿ ವತ್ಸಲತ್ವವೂ, ಶಿವಪೂಜೆಯಲ್ಲನುಮೋದನವೂ, ತಾನು ಶಿವಪೂಜೆಯನ್ನು ಮಾಡುವಣವೂ, ಶಿವಾರ್ಥವಾಗಿ ದೇಹವನ್ನು ಚೇಷ್ಟಿಸುವುದೂ, ಶಿವಕಥಾಶ್ರವಣದಲ್ಲಿ ಭಕ್ತಿಯೂ, ಆ ಕಥೆಗಳನ್ನು ಕೇಳುವಲ್ಲಿಯೂ ಹೇಳುವಲ್ಲಿಯೂ, ಶಿವಸ್ತುತಿಯಲ್ಲಿಯೂ, ಗದ್ಗದಸ್ವರ ಆನಂದಾಶ್ರು ರೋಮಾಂಚ ಕಂಪಾದಿ ವಿಕಾರಗಳೂ, ನಿತ್ಯದಲ್ಲಿ ನನ್ನನ್ನು ಸ್ಮರಿಸುವಣವೂ, ಶಿವಭಕ್ತಿಯಲ್ಲದೆ ಬೇರೊಂದು ಫಲವನ್ನು ಬಯಸದಿರುವಣವೂ ಇಂತೆಂಬ ಎಂಟು ತೆರನಾದ ಭಕ್ತಿಯು ಆವನೊಬ್ಬ ಮ್ಲೇಚ್ಛನಲ್ಲಿ ತೋರಿದರು ಅವನೆ ವಿಪ್ರೇಂದ್ರನು, ಮುನಿಯು, ಲಕ್ಷ್ಮಣಾನ್ವಿತನು, ಯತಿಯು, ಪಂಡಿತನು ಎಂಬೀ ಸೌರಸಂಹಿತಾ ವಾಕ್ಯವನ್ನು ನೋಡು. ಇದಲ್ಲದೆ ಶಿವಮಂತ್ರಶಿಖಾಮಣಿಯಾದ ಶ್ರೀಷಡಕ್ಷರೋಪದೇಶದಲ್ಲಿ "ಯೇಷು ಯೇಷು ಮಹಾದೇವಿ ಭಕ್ತಿ ರವ್ಯಭಿಚಾರಿಣೀ । ಯೋಗ್ಯಾಸ್ತ ಏವ ಮಂತ್ರಸ್ಯ ಭಕ್ತಿರೇವಾತ್ರ ಕಾರಣಮ್ ॥ ವಿಶೇಷಂ ಯತ್ರದೀಕ್ಷಾಸು ಪೂರ್ವಿಕಾಭಕ್ತಿರಸ್ತಿಹಿ । ನತತ್ರಜಾತಿ ಭೇದೋಸ್ತಿ ಸರ್ವೇರುದ್ರಸ್ವರೂಪಿಣಃ । ಯತ್ರಸ್ಯಾದ್ಭಾತಿ ಸಾಮಾನ್ಯಂ ತತ್ರಜಾತ್ಯಾದಿಕಲ್ಪನಾ । ತಸ್ಮಾದಯೋಗ್ಯೋ ಯೋಗ್ಯಶ್ಚೇತ್ಯೇವಂ ಶಂಕಾನ ತತ್ರಹಿ ॥" ಸೂ. ಪ. ॥ ಶ್ಲೋಕ ೨೪-೨೬-೨೮ ಅತ್ಯಂತ ಭಕ್ತಿಯುಳ್ಳವರಾಗಿ ಶಿವದೀಕ್ಷಾ ಹೊಂದಿದವರು ಜಾತಿಭೇದವಿಲ್ಲದೆ ಷಡಕ್ಷರೋಪದೇಶಕ್ಕೆ ಯೋಗ್ಯರಹರೆಂದು ಶಿವವಚನವುಂಟು. ಶಿವದೀಕ್ಷೆಯೂ ಅದಕ್ಕೆ ಹೇತುವಾದ ನಿರವಧಿಕಭಕ್ತಿಯೂ ಇಲ್ಲದಿರಲು ಮಾತ್ರ ಸ್ತ್ರೀಶೂದ್ರರು ಷಡಕ್ಷರಗ್ರಹಣಕ್ಕೆ ಅಧಿಕಾರವನ್ನು ಹೊಂದರೆಂದು ಅಲ್ಲಿಯೆ ಬರೆದಿದೆ. ನೋಡು:—" ಪ್ರಣವೇನ ವಿನಾಮಂತ್ರಃಸ್ತ್ರೀಶೂದ್ರಾಣಾಂ ಪ್ರಸಾದಕಃ । ಯದಿದದ್ಯಾತ್ಸಪ್ರಣವಮುಭಯೋರ್ನಿತಧೋಭವೇತ್ " ಸೂ. ೬ ಪ. ಶ್ಲೋ. ೨೫: ಇದರಂತೆಯೆ ಸರ್ವ ಆಗಮಗಳಲ್ಲಿಯೂ ಲಿಂಗಧಾರಣಕ್ಕಾಗಿ ಶಿಷ್ಯನ ಸ್ವಕೀಯುವಾದ ಯೋಗ್ಯ

ತೆಯನ್ನೂ ಅನನ್ಯ ಶಿವಭಕ್ತಿಯನ್ನೂ ನೋಡಬೇಕು. ಇದೇ ಗುರುವಿ
ನ ಅದ್ಯಕರ್ತವ್ಯವು ಎಂದು ನಿಃಶಂಕವಾಗುವಂತೆ ಹೇಳಿರುವುದು. "ಯ
ಸ್ಯ ಮತ್ಕರುಣಾಪಾತ್ರಂ ಚರಮಂಜನ್ಮಯಸ್ಯವಾ । ತಸ್ಯೈವಜಾಯತೇ
ಭಕ್ತಿರ್ಮಮಲಿಂಗಸ್ಯಧಾರಣೇ। ನಿರ್ವಿಣ್ಣವಿಷಯಃ ಶಾಂತಃ ಸರ್ವತ್ರ
ಸಮದರ್ಶನಃ। ಮುಮುಕ್ಷುರೀಶ್ವರೇಭಕ್ತಃ ಶ್ರೀಗುರುಂಶಿವಮಾಶ್ರಯೇ
ತ್ ॥ ಪಾ. ೨. ೬೧-೬೨. "ಇತ್ಯಾದಿ ಗುಣಸಂಪನ್ನಮಥ ತಂದೀಕ್ಷ
ಯೇಚ್ಛಿವೇ" ಪಾ. ೨-೬೫. ಆವಾತನು ನನ್ನ ಕರುಣೆಗೆ ಭಾಜನವಾಗಿ
ಹನೋ, ಆವಾತನಿಗೆ ಇದೇ ಕೊನೆಯ ಜನ್ಮವೋ, ಆತನಿಗೆಯೆ ನನ್ನ ಲಿಂ
ಗಧಾರಣದಲ್ಲಿ ಭಕ್ತಿಯುಂಟಾಗುತ್ತದೆ. ವಿಷಯಗಳನ್ನು ಭೋಗಿಸಿದಾ
ತನೂ (ವಿಷಯ ಭೋಗವಿನ್ನು ಸಾಕು ಇಂತೆಂಬ ಮತಿಯುಳ್ಳಾತನು)
ಶಾಂತನೂ, ಸರ್ವಪದಾರ್ಥಗಳಲ್ಲಿಯೂ ಸಮದೃಷ್ಟಿಯುಳ್ಳಾತನೂ,
ಮುಕ್ತ್ಯಪೇಕ್ಷಕನು ಶ್ರೀಗುರುವನ್ನಾಶ್ರಯಿಸತಕ್ಕದು. "ಇವೆ
ಮೊದಲಾದ ಗುಣಗಳನ್ನುಳ್ಳಾತನೆಂದು ಪರೀಕ್ಷೆಯಾದಬಳಿಕ ಆತನನ್ನು
ದೀಕ್ಷಿಸಬೇಕು. ಕುಲಾಚಾರದ ಸ್ಮೃತಿಗಳಲ್ಲಿ ಜಾತಿಯು ಮುಖ್ಯ
ತ್ವೇನ ಹೇಳಲ್ಪಟ್ಟಿರುತ್ತದೆ. "ಗರ್ಭಾಷ್ಟಮೇಽಬ್ದೇ ಕುರ್ವೀತ ಬ್ರಾ
ಹ್ಮಣಸ್ಯೋಪನಾಯನಮ್ । ಗರ್ಭಾದೇಕಾದಶೇ ರಾಜ್ಞೋ ಗರ್ಭಾತ್ತು
ದ್ವಾದಶೇ ವಿಶಃ ॥" ಮನು. ೨-೩೬. ಬ್ರಾಹ್ಮಣ ಕ್ಷತ್ರಿಯ ವೈ
ಶ್ಯರ ಮುಂಜಿಯನ್ನು ಗರ್ಭದಿಂದ ಎಂಟನೆಯ, ಹನ್ನೊಂದನೆಯ, ಹನ್ನೆ
ರಡನೆಯ ವರ್ಷದಲ್ಲನುಕ್ರಮವಾಗಿ ಮಾಡಬೇಕು. ಆದರೆ ದೀಕ್ಷಾ ವಿ
ಧಾನದಲ್ಲಿ ಗುಣಪರೀಕ್ಷಣವು ಮುಖ್ಯವಾಗಿದೆ. ಅಂದರೆ "ತ್ವಂದೇ
ವೇಷು ಬ್ರಾಹ್ಮಣೋಽಹಂ ಮನುಷ್ಯೇಷು ಬ್ರಾಹ್ಮಣಃ । ಬ್ರಾಹ್ಮ
ಣೋ ಬ್ರಾಹ್ಮಣ ಮುಪಧಾವತ್ಯುಪತ್ವಾಧಾವಾಮಿ" (ವೀರಶೈವ ಧ
ರ್ಮ ಶಿರೋಮಣಿಯ ೨೬ನೇ ಶ್ಲೋಕದ ಟೀಕೆಯಲ್ಲಿಯೂ ಇತರತ್ರ
ವೂ ಉದಾಹರಿಸಿದ ಶ್ರುತಿಯು) ಎಂಬ ಶ್ರುತಿಪ್ರಮಾಣದಿಂದ
ಶಿವನನ್ನು ಹಿಂಬಾಲಿಸುವಿಕೆಯೆಂಬ ಸಹಜ ಬ್ರಾಹ್ಮಣತ್ವವು ಇಲ್ಲಿ ಮು
ಖ್ಯವು. ವರ್ಣಬ್ರಾಹ್ಮಣ್ಯವೆಂಬ ಕಲ್ಪಿತ ಬ್ರಾಹ್ಮಣ್ಯವು ಮುಮು
ಕ್ಷು ತ್ಯಾಜ್ಯವೆಂಬಭಿಪ್ರಾಯವನ್ನು ಸಿದ್ಧಾಂತ ಶಿಖಾಮಣಿಕಾರನಾದ

ರು ಶ್ರೀಮದ್ರೇಣುಕ ಮುಖೇನ ಹೇಳಿರುವನು. "ಭೂತ್ವಾಕರ್ಮವಶಾಜ್ಜಂತುರ್ಬ್ರಾಹ್ಮಣಾದಿಷು ಜಾತಿಷು । ತಾಪತ್ರಯ ಮುಪಾದಹ್ನಿ ಸಂತಾಪಾದ್ದಹ್ಯತೇ ಭೃಶಮ್ ॥" ಸಿ. ಸ. ೫. ಕರ್ಮವಶದಿಂದ ಜನನ ದುಃಖಕ್ಕೊಳಗಾದ ಜೀವನು. ಬ್ರಾಹ್ಮಣಾದಿ ಜಾತಿಗಳಲ್ಲಿ ಹುಟ್ಟಿ ಆಧ್ಯಾತ್ಮಿಕ ಆಧಿದೈವಿಕ ಅಧಿಭೌತಿಕವೆಂಬ ತಾಪತ್ರಯಗಳಿಂದ ಬಹಳ ವಾಗಿ ಬೇಯುವನು. ಆದುದರಿಂದ ಇನ್ನುಳಿದ ತಾಪತ್ರಯ ಹೇತುಗಳಿಂದ ಶರೀರಾದಿಗಳಲ್ಲಿ ಹೇಯಬುದ್ಧಿಯನ್ನು ಮಾಡುವಂತೆ ಬ್ರಾಹ್ಮಣಾದ್ಯಾದಿ ಜಾತಿಗಳಲ್ಲಿಯೂ ಶಿವದೀಕ್ಷಾಪೇಕ್ಷಿತನು ಹೇಯಬುದ್ಧಿಯನ್ನುಳ್ಳ ತನಾಗತಕ್ಕದೆಂಬುವು ಸ್ಮೃತಃ ಸಿದ್ಧವು.

"ಯಾತೇರುದ್ರ ಶಿವಾತನೂರಘೋರಾಪಾಪಕಾಶಿನೀತಯಾನಸ್ತನುವಾ ಶಂತಮಯಾ ಗಿರಿಶಂತಾಭಿಚಾಕಶೀಹಿ" ಎಂಬೀ ಶ್ರುತಿಯಿಂದ ಪಾಪ ರಹಿತರಾದ ಶಿವಭಕ್ತರಲ್ಲಿ ಪರಮೇಶ್ವರನು ಲಿಂಗತನುವಿನಿಂದ ವಿರಾಜಿಸುತ್ತಿರುವುದರಿಂದಲೂ ಈ ಶ್ರುತ್ಯನು ಸಾರವಾಗಿಯೆ, "ಮಲ್ಲಿಂಗಧಾರಿಣೋಯೇಚ । ಭೂತಿರುದ್ರಾಕ್ಷಸಂಯುತಾಃ । ಯೇವೈಮದೇಕಶರಣಾ ಸ್ತಾನ್ದೃಷ್ಟ್ವಾಪ್ರಣಮೇನ್ಮುದಾ" ಸೂಕ್ಷ್ಮ. ೫—೬ ಆರೋಬ್ಬರು ಶಿವಲಿಂಗಧಾರಿಗಳಿರುವರೋ, ಭೂತಿ ರುದ್ರಾಕ್ಷಗಳನ್ನು ತಾಳಿಹರೋ, ಶಿವಶರಣರು ಅವರನ್ನು ಕಂಡೊಡನೆಯೆ ಅವಶ್ಯವಾಗಿ ನಮಸ್ಕರಿಸಿ ಸಂತೋಷವಂ ಹೊಂದಬೇಕು. ಎಂಬೀ ಸೂಕ್ಷ್ಮಾಗಮ ವಚನವು ಲಿಂಗ ಯುತರಾದ ಶಿವಭಕ್ತರಲ್ಲಿ ಜಾತಿಭೇದವಿಲ್ಲದೆ ಭಕ್ತಿಯನ್ನುಪದೇಶಿಸುವುದರಿಂದಲೂ, ಕೇವಲ ಧರ್ಮವೆ ಸ್ವರೂಪವಾದ ಶ್ರೀಬಸವನು, "ಆವಕುಲವಾದರೇನು ಶಿವಲಿಂಗವಿದ್ದವನೆ ಕುಲಜನು. ಕುಲನಸುವರೆ ಪರಜರಲ್ಲಿ, ಜಾತಿ ಸಕರವಾಗಿರ್ದಬಳಿಕ, ಶಿವಜಾತಃಕುಲೀನೋಸೌ । ಪೂರ್ವಜನ್ಮವಿವರ್ಜಿತಃ ಉಮಾ ಮಾತಾ ಪಿತಾರುದ್ರ ಈಶ್ವರಃ ಕುಲದೇವತಾ ॥ ಎಂದುದಾಗಿ ಒಕ್ಕುದ ಕೊಂಬೆನವರಲ್ಲಿ ಕೂಸಕೊಡುವೆ ಕೂಡಲ ಸಂಗಮದೇವ ಅವರಲ್ಲಿ ನಂಬುವೆನು ನಿಂಮ ಶರಣರನು." ವಾ. ೧೯೧ ಎಂಬೀ ವಚನವನು ಶಿವಶಾಸ್ತ್ರಗಳಲ್ಲಿ ಹೇಳಿರುವದನ್ನು ಕನ್ನಡಿಸಿ ನುಡಿದಿರುವನು. ಮತ್ತು ಅದರಂತೆ ಕುಲಸೂತಕವಿಲ್ಲದೆ ನಡೆದಿರುವನು.

ಅನಾದಿಕಾಲದಿಂದ ಬಂದ ಭಕ್ತಜಂಗಮ ವಂಶವು ಮೇಲೆ ಹೇಳಿದ ಕ್ರಮದಿಂದ ದೀಕ್ಷಾ ಸಂಸ್ಕೃತವಾಗಿ ಬಂದಿದೆಯಲ್ಲದೆ ಜಾತಿಪ್ರಧಾನ ಕ್ರಮದಿಂದ ಬಂದಿಲ್ಲ. ಬಂದಿದೆಯೆನ್ನುವುದಕ್ಕೆ ಆವತೆರದ ಪ್ರಮಾಣವಿಲ್ಲ. ವೇದಕಾಲದಲ್ಲಿ ಕಂಡುಬಾರದ ಜನ್ಮಮಾತ್ರದಿಂದ ವರ್ಣಗಳ ಕ್ಲಿಷ್ಟತೆಯುಂಟಾಗಿ ಸ್ಮೃತಿಗಳಲ್ಲಿಯೂ ಇತಿಹಾಸ ಪುರಾಣಗಳಲ್ಲಿಯೂ ವರ್ಣವಿಭಾಗವು ಹೇರಳವಾಗಿ ದೊರಕುತ್ತದೆ. ಈ ಓಘಕ್ಕೆ ಸಿಲುಕದೆ ಪೂರ್ವದ ಶುದ್ಧ ವೈದಿಕ ಪರಂಪರೆಯನ್ನು ಅನುಸರಿಸಿದ ವೀರಶೈವ ಷಟ್ಸ್ಥಳ ಸಿದ್ಧಾಂತವು. ಶಿವಾಗಮಗಳಲ್ಲಿಯೂ, ಶಿವಪುರಾಣಗಳಲ್ಲಿ ಕೆಲವೆಡೆಯಲ್ಲಿ ಮಸುಕಾಗಿಯೂ, ತೋರುತ್ತಿರುವುದು. ಈ ಸಿದ್ಧಾಂತದಂತೆ ಜನ್ಮತಃ ಮಾಹೇಶ್ವರ ವಂಶವು ಕಂಡುಬರುವುದಿಲ್ಲ.

ನಾಮದಾರ ಪಟೇಲರ ಮಿಶ್ರವಿವಾಹ ಬಿಲ್ಲಿಗೂ ಹರಳಯ್ಯ ಮಧುವಯ್ಯಗಳ ಬೀಗತನಕ್ಕೂ ಹೋಲಿಸುವೆಯಲ್ಲವೆ! ಅವುಗಳಲ್ಲಿಯ ಮಹದಂತರವನ್ನು ಕೇಳು.—ಡಾ. ಪಟೇಲರವರ ಮಿಶ್ರ ವಿವಾಹ ಬಿಲ್ಲು ಆಧ್ಯಾತ್ಮಿಕ ಸಂಸ್ಕಾರದಿಂದ ಏಕಸ್ವರೂಪವಾದವರ ನಡುವೆಯಲ್ಲ ಬಾಹ್ಯ ಉಪಾಧಿಗಳಲ್ಲಿ ಏಕವಿರುವವರನ್ನು ಕುರಿತು ಇತ್ತು. ಅಂದರೆ ದಂಪತಿಗಳಾಗತಕ್ಕವರು ಹೊರಗಿನವಾದ ರೀತಿ ನಡತೆಗಳಲ್ಲಿ ಏಕರೂಪವಾಗಿದ್ದರೆ ಸಾಕು. ಹರಳಯ್ಯ ಮಧುವಯ್ಯಗಳ ಬೀಗತನದ ವಿಷಯವಂತಲ್ಲ. ಭಕ್ತಿಯಿಂದ ಶಿವಜಾತರಾಗಿ ಲಿಂಗ ಸಂಸ್ಕಾರವನ್ನು ಹೊಂದಿ ಆಧ್ಯಾತ್ಮಿಕ ಉನ್ನತಿಯಲ್ಲಿಯೂ ಏಕರಸವಾದವರಲ್ಲಿ ಹೆಣ್ಣುಗಂಡುಗಳ ವ್ಯವಹಾರವಾಗಬಹುದೆಂಬುದಾಗಿಯದೆ. ವಿಚಾರ ಮಾಡಿ ನೋಡಿದರೆ ಶ್ರೀಬಸವನ ಪದ್ಧತಿಯು ಅತಿ ಪ್ರಾಚೀನ ವೈದಿಕ ಋಷಿಗಳು ಒಪ್ಪಿದುದಾಗಿದೆ. ನೋಡು-"ವಶಿಷ್ಠ ಊರ್ವಶ್ಯಾಂ" ವಜ್ರಸೂಚಿ ಎಂಬ ಪ್ರಮಾಣದಿಂದ ವಶಿಷ್ಠನು ಊರ್ವಶಿಯ ಮಗನು. ಆತನ ಹೆಂಡತಿಯಾದ ಅರುಂಧತಿಯು ಕರ್ದಮ ಮುನಿಕನ್ಯೆಯು.

ಶ್ರೀಬಸವನು ಪಂಚಪರುಷೋಪೇತನಹುದು. ಆತನು ಬಿಜ್ಜಳನ ಭಾಂಡಾರವನ್ನು ಹಾಳು ಮಾಡಲಿಲ್ಲ. ವೀರಶೈವ ಮತಮಹಿಮ ಪ್ರತಿಷ್ಠೆಗಾಗಿ ಬಿಜ್ಜಳನ ಭಂಡಾರದಿಂದ ಕೊಟ್ಟಂತೆ ತೋರಿಸಿ ಲೆಕ್ಕವನ್ನು

ಸೈರಿಸಲು ಒಂದು ಕಾಸೆಯಾದರು ಕಡಿಮೆಯಾಗದಂತೆ ಕೋಶವನ್ನೊಪ್ಪಿಸುತ್ತಿದ್ದನು. ಪೂರ್ವದಲ್ಲಿ ನಕ್ಕ ನಾಯನಾರ ವೃತ್ತಾಂತವೂ ಅರ್ವಾಚೀನ ಕಾಲದಲ್ಲಿ ಬೀದರದ ರಾಮೋಜಿಯ ವೃತ್ತವೂ ಇದೇ ತೆರದವಾಗಿವೆ.

ಈ ಪಂಚಪರುಷಗಳನ್ನು ಶಿವಭಕ್ತರ ಹಿತಕ್ಕಾಗಿಯೆ ಆತನು ಉಪಯೋಗಿಸುವನು. ಬಸವನಿಗೆ ಸ್ವಾರ್ಥವೆಂಬುದಿದ್ದಿಲ್ಲ. ಸ್ವಾರ್ಥಪರರಿಗೆ ಪಂಚಪರುಷಗಳೇಕೆ ಒಂದಾದರು ಪರುಷವಿರುವುದಿಲ್ಲ. ಆದುದರಿಂದ ಬಸವನು ತನ್ನರಮನೆಯನ್ನು ಬಂಗಾರದುದನ್ನು ಮಾಡಲಿಲ್ಲ.

ಪಂಚಪರುಷಗಳು ತನಗಿದ್ದರೂ ಬಸವನು ಶಿವಭಕ್ತರ ಮಹಿಮೆಯನ್ನರಿತವನಿದ್ದನು. ಶಿವಭಕ್ತರಿಗೆ ಎದುರುತ್ತರಗೊಡುವುದು ಅತಿ ಪಾಪವೆಂದು ಶೈವಸಿದ್ಧಾಂತವು. ಕನ್ನದ ಬೊಮ್ಮಯ್ಯನು ಕಳ್ಳನಲ್ಲ. ಆತನು ಶಿವಭಕ್ತಿಗೆ ಹಣವನ್ನು ಸಲ್ಲಿಸದವರಲ್ಲಿಂದ ಹಣವನ್ನು ಕದ್ದು ಅವರಿಗೆ ಇಹಲೋಕದಲ್ಲಿ ಸುಖವನ್ನೂ ಪರಲೋಕದಲ್ಲಿ ಮೋಕ್ಷವನ್ನೂ ಉಂಟು ಮಾಡುತ್ತಿದ್ದನು. ಶಿವಧರ್ಮದ ಮಹಿಮೆಯೆ ಅಂತಹದು. ನೋಡು—"ಪಿತೃದೇವೋಭವ" ಎಂದು ವೇದಾಜ್ಞೆಯು. ಚಂಡನು ಶಿವಭಕ್ತಿಗಾಗಿ ತಂದೆಯನ್ನು ವಧಂಗೈದನು. ಸತಿಗೆ ಪತಿಯೇ ದೈವವೆಂದು ಶ್ರುತಿಯು ಸಾರುವುದು. ಆದರೆ ಶಿವಭಕ್ತೆಯಾದ ಸತಿಯು ಶಿವಭಕ್ತಿರಹಿತನಾದ ಪತಿಯನ್ನಾದರು ತ್ಯಜಿಸಿ ಬ್ರಹ್ಮಚರ್ಯದಿಂದಿರಬೇಕೆಂದು ಶಿವಧರ್ಮವು. ನೋಡು—"ದತ್ತಾಚೇತ್ಪ್ರತಿ ಕೂಲಾಯ ಪ್ರಮಾದಾಚ್ಛೈವಯೋಷಿತಂ । ಅಶಕ್ತಾತಂ ಪರಿತ್ಯಜ್ಯ ಮನಸಾ ಧರ್ಮಮಾಚರೇತ್" ಕ್ರಿಯಾಸಾರೋದಾಹೃತ ಶಿವವಾಕ್ಯ. ಆದುದರಿಂದ ಸ್ವಪ್ರಯೋಜನ ಗಂಧವಿಲ್ಲದೆ ಕೇವಲ ಗುರುಲಿಂಗಜಂಗಮ ಸೇವೆಗಾಗಿಯೂ ಪಾಮರರ ಉದ್ಧಾರಕ್ಕಾಗಿಯೂ ಕನ್ನದ ಬೊಮ್ಮಯ್ಯನು ಕನ್ನವನಿಕ್ಕುವುದು ಧರ್ಮಸಂಮತವು. ಅದಕ್ಕಂತೆಯೆ ಬಸವನ ಸಹಾಯವು. "ನಮಃ ಕಕುಭಾಯ ನಿಷಂಗಿಣೇ ಸ್ತೇನಾನಾಂ ಪತಯೇ ನಮಃ" ಶ್ರೀರುದ್ರ ಖಡ್ಗಹಸ್ತನಾಗಿಯೂ, ಪ್ರಧಾನಭೂತನಾಗಿಯೂ ಕಳ್ಳ[illegible]

ಧ್ರವು ನುತಿಸಿ ಕನ್ನದ ಬೊಮ್ಮಯ್ಯನಂತಹ ಕಳ್ಳರಿಗೊಡೆಯನೆಂದು ಶಿವ ನನ್ನು ಕೊಂಡಾಡುತ್ತದೆ. ಇದೆಲ್ಲವನ್ನು ಗರ್ಭೀಕರಿಸಿ ಶ್ರೀಬಸವೇಶನು " ಇಂತ ಕುಳಿ ಮಹಿಮೆಯುಳ್ಳಂ । ಗೆಂತುಂ ದುರ್ಲಭಮದಾವುದಾತಂ ನಿ ನ್ನಂ । ಸಂತಸಬಡಿಸಲಪಲಿಯದ್ದಿದ । ನಂತಲ್ಲದೆ ಬಂದನಲ್ತೆ ವಿಶ್ವಸ್ಪೃಹ ಯಿಂ " ಎಂದು ಹೇಳಿದುವನು. ಶ್ರೀಷಡಕ್ಷರನು— ಆ ಕಲ್ಯಾಣದೊಳಿ ರ್ದಂ । ಶ್ರೀಕಲ್ಯಾಣೇಶ ವಿಮಳಪದ ಭಕ್ತನಘಾ । ನೀಕವಿರಹಿತ ಚರಿ ತನ । ನೋಕಮ ಶೋಭವಲಿತಾತನನುಪಮ ಮಹಿಮಂ ॥ ಎಂದು ಮೊದಲಾಗಿ ಬೊಮ್ಮಯ್ಯನನ್ನು ಕೊಂಡಾಡಿರುವನು. ಬೊಮ್ಮಯ್ಯನು ಕನ್ನವನಿಕ್ಕಿದ ಬಿಜ್ಜಳನ ಭಂಡಾರವು ಚಿಗುರಿತು.

ಗೊಲ್ಲಕಿಯಂತೆ ಭಕ್ತಿಯಿಂದ ಬಸವನಾಮೋಚ್ಚರಣಗೆಯ್ದವರಿಗೆ ಬರೆ ಅಂದೇಕೆ ಇಂದಾದರು ಬೀಳುವಿಕೆಯೂ, ಶಿವಭಕ್ತ ನಿಂದಕರಂತೆ ಯ ಮದೂತರಿಂದ ನಾಯುವಿಕೆಯೂ, ಇಲ್ಲವೆಂಬುದು ಖಂಡಿತವು.

ಶ್ರೀಬಸವನಿಗೆ ಬಾಲಸಂಗನೆಂಬ ಮಗನಿದ್ದನು. ಆತನಿಗೆ ಶಿವ ಶರಣಿಗಾಗುವ ಶಿವಸಾಯುಜ್ಯವೆಂಬ ಗತಿಯಾದಿತು.

ಬಸವನು ಈಗಲಾದರು ಭಜಕರಿಗೆ ಇಷ್ಟಾರ್ಥಗಳನ್ನು ಕೊಡು ಡುತ್ತಲಿರುವುದರಿಂದ ಸಂಗಮನಲ್ಲಿ ಐಕ್ಯ ಹೊಂದಿದುದೆ ನಿಜವು. ಪ್ರಾ ಕೃತರಾದ ಐತಿಹಾಸಿಕರು ಈ ವಿಷಯವನ್ನು ತಿಳಿಯಲಾರರು.

ಬಸವನು ಸಂಗಮೇಶನಲ್ಲಿಯೆ ಜನಿಸಿದ್ದನು. ಗುರುಕರಜಾತನು ಗುರುಗರ್ಭಜಾತನಾದುದರಿಂದಲೆ ಸಂಗಮನಲ್ಲೈಕ್ಯವಾದನು. ಇಲ್ಲಿ "ಗು ರುಹಸ್ತಾಂ ಬುಜಾತ್ | ಜಾತಸ್ಯ" ಎಂಬ ಸೂಕ್ಷ್ಮಾಗಮವೂ, "ತ್ವಮೇವನಃ ಪಿತಾ" ಎಂಬ ಶ್ರುತಿಯೂ ಪ್ರಮಾಣವಾಗಿರುವವಲ್ಲದೆ ಲಿಂ ಗದ ಪೂರ್ವಾಶ್ರಯವ ಕಳೆದು ಪ್ರಾಣಲಿಂಗವೆಂದು ತೋರಬಂದನಯ್ಯ ಬಸ ವಣ್ಣನು. ಲಾಂಛನದ ಪೂರ್ವಾಶ್ರಯವ ಕಳೆದು ಲಿಂಗ ಜಂಗಮವೆಂದು ತೋರಬಂದನಯ್ಯ ಬಸವಣ್ಣನು. ಪ್ರಸಾದದ ಪೂರ್ವಾಶ್ರಯವ ಕಳೆ ದು ಶುದ್ಧ ಮಹಾ ಪ್ರಸಾದವೆಂದು ತೋರಬಂದನಯ್ಯ ಬಸವಣ್ಣನು ಲಿಂಗಜಂಗಮ ಪ್ರಸಾದದ ಪೂರ್ವಾಶ್ರಯವ ಕಳೆದು ... ಐಕ್ಯಕ್ಕೆ ಜ

ನಿಸಿದನಯ್ಯ ಕೂಡಲಚನ್ನಸಂಗನಲ್ಲಿ ಬಸವಣ್ಣನು." ಚತುರ್ಥಸಂಪಾ ಪನೆ. ೧೭. ಎಂಬ ಸಂಪ್ರದಾಯ ವಚನವೂ ಉಂಟು.

ಬಸವನು ಸಂಗಮನಲ್ಲಿ ತನ್ನ ಪತ್ನಿಯರೊಡನೆ ಐಕ್ಯವಾದನು. ಸಂಗಮನಾಥನು ಖಂಡಿತನಲ್ಲ, ಅಖಂಡನು ಆದುದರಿಂದ ಭೂಮಿಯ ದೃಷ್ಟಿಯಿಂದ ಬಸವನೈಕ್ಯವಾದ ಸ್ಥಳಕ್ಕೂ ಶ್ರೀಮಾತೃನೀಲಾಂಬಿಯು ಐಕ್ಯವಾದ ಸ್ಥಳಕ್ಕೂ ಒಂದು ಹರದಾರಿಯ ಅಂತರವಿದ್ದರೂ ಭೂಮಿಯೆ ಪೀಠ ಆಕಾಶವೇ ಗೋಲಕವಾದ ಮಹಾಲಿಂಗವನ್ನು ಸಾಕ್ಷಾತ್ಕರಿಸಿ ಅದರಲ್ಲಿಯೆ ಐಕ್ಯವಾದ ದಂಪತಿಗಳಿಗೆ ಇದು ಅಕಿಂಚಿತ್ಕರವು.

ಪರಸ್ಪರ ಹೊಡದಾಡಿ ಖಡ್ಗದ ಬಾಯಿಗೀಡಾದವರಿಗೆ ಲಿಂಗೈಕ್ಯರಾದರೆಂದೆಲ್ಲಿಯೂ ಬರೆದಿಲ್ಲ. ಹಾಗು ಇಂತಹರು ಭಕ್ತರ ಅಬೀಷ್ಟಗಳನ್ನು ಪೂರ್ತಿಗೊಳಿಸಿಲ್ಲ. ಭಕ್ತರಭೀಷ್ಟವನ್ನು ಈಗಲೂ ಪೂರಿಸುತ್ತಿರುವ ಕಲ್ಯಾಣ ಬಸವನು ಲಿಂಗೈಕ್ಯನಾದನೆಂಬುದೇ

ಸತ್ಯ! ಸತ್ಯ!! ಸತ್ಯ!!!



# ಅನುಬಂಧ.

"Of all the districts in the Bombay Presidency, the Kanarese districts have been perhaps the most backward in social reform; and yet, as Mr. Natarajan pointed out in his address, Bijapur, which is Kanarese, is gronnd to Indian social reformers, **Not very far from it, in the Kanarese country, was born and flourished the great Basawa, founder of the Lingayat sect, and there he vigorously prosecuted his crusade against blind conformity to custom, caste, infant marriage, enforced widowhood, and, above all, the subject of women.** It was the distinctive feature of his mission that while illustrious religious and social reformers in India before him had each laid his emphasis on one or other item of religious and social reform, either subordinating more or less other items to it, or ignoring them altogether, Basawa sketched and boldly tried to work out a large and comprehensive programme of social reform with the elevation and independence of womanhood as its guiding point. **Neither social conferences which are annually held in these days in several parts of India, nor Indian social reformers, can improve upon that programme as to the essentials. As was in substance remarked by the late *Sir* James Campbell, whose knowledge of**

Indian History, customs and manners was almost phenomenal, the present day social reformer in India is but speaking the language and seeking to enforce the mind of Basawa."

( Times of India,. 17th May 1918 ).

---

ಇದಲ್ಲದೆ, ಬಸವನು ಲಿಂಗಾಯತ ಮತದ ಸ್ಥಾಪಕನೆಂತಾಗಲಿ ಅಥವಾ ಪುನರುಜ್ಜೀವಕನೆಂತಾಗಲಿ ಬರೆದ ಪುಸ್ತಕಗಳು. Encyclopedia Britanica Vol. XIII, Page 508 and Vol. XVI, page 728.

Griffith's Castes and Tribes in India ಇದರಲ್ಲಿ ಶ್ರೀಬಸವೇಶನು ಉದಾತ್ತ ತತ್ವದ ಧರ್ಮಬೋಧಕನಿದ್ದನೆಂದು ಹೇಳಿ ವೈಷ್ಣವ ಮತದಲ್ಲಿ ಇಂತಹ ಸುಧಾರಕನು ಚೈತನ್ಯನು. ಆತನು ಬಸವನಿಂದ ಹಿಂದುಗಡೆಯಲ್ಲಿ ಮೂರು ಶತಮಾನಗಳನಂತರ ತೋರಿದನೆಂದು ಬರೆದದೆ.

೧೯೧೧ ರ ಜನಗಣಿತೆಯು ವರದಿ ಸಂಪುಟ ೭ ಭಾಗ ೧. ಮುಂಬೈ ಪುಟ ೨೮೩.

ರಾಯಿಸ ದೊರೆಯ ಮೈಸೂರ ಮತ್ತು ಕುರ್ಗ ಇತಿಹಾಸ,

ಈ ಯಾವ ಗ್ರಂಥಗಳಲ್ಲಿಯೂ ವೀರಶೈವಮತ ಸ್ಥಾಪಕರೆಂದು ಇನ್ನುಳಿದವರ ಹೆಸರು ಬಂದಿಲ್ಲ. ಆಗಮ ಸಂಹಿತೆಗಳ ಅವತಾರಕರಾದ ಪ್ರಣವಾದಿಗಳನಂತರ ಬಸವನ ಕಾಲದ ವರೆಗೆ ಇಷ್ಟು ಪ್ರಖ್ಯಾತಿಗೊಂಡ ಯಾವ ವೀರಶೈವ ಧರ್ಮಬೋಧಕರು ಆಗದರಿಂದಲೂ ಪಾಶ್ಚಾತ್ಯ ವಿದ್ವಾಂಸರಿಗೆ ಆಗಮ ಸಂಹಿತೆಗಳ ಪರಿಚಯವಿಲ್ಲದರಿಂದಲೂ ಶ್ರೀಬಸವನೇ ಈ ಮತದ ಆದಿ ಪುರುಷನೆಂದು ಬರೆದುದು ಸೋಜಿಗವಲ್ಲ. ಶ್ರೀಬಸವನು ಅಲ್ಪಕಾಲದಲ್ಲಿ ಕರ್ಣಾಟಕವನ್ನು ವೀರಶೈವಮಯವಾಗಿ ಮಾಡಿದುದನ್ನು ನೋಡಿದರೆ, ಅವನು ಈ ಮತದ ಆದ್ಯ ಪುರುಷನೆಂದು ಅನ್ನಲು ಅಭ್ಯಂತರವಿಲ್ಲ.

